# ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)




ಸಂಶೋಧಕರು

ಲೋಕೇಶ ಬಿ.

ಮಾರ್ಗದರ್ಶಕರು

ಡಾ. ವಾಸುದೇವ ಬಡಿಗೇರ

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ







ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ 583276

2015

# ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)

ಸಂಶೋಧಕರು

**ಲೋಕೇಶ ಟಿ.**

ಮಾರ್ಗದರ್ಶಕರು

**ಡಾ. ವಾಸುದೇವ ಬಡಿಗೇರ**

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ

**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೧೫

## ಸಂಶೋಧಕರ ಪ್ರಮಾಣ ಪತ್ರ

**ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಈ ಕಿರುಪ್ರಬಂಧವನ್ನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರು **ಡಾ. ವಾಸುದೇವ ಬಡಿಗೇರ,** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಕಿರುಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Lokesha-T.

**ಸ್ಥಳ : ವಿದ್ಯಾರಣ್ಯ**
**ದಿನಾಂಕ:**

**(ಲೋಕೇಶ ಟಿ.)**
ಸಂಶೋಧನಾ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಮಾರ್ಗದರ್ಶಕರ ಪ್ರಮಾಣ ಪತ್ರ

**ಲೋಕೇಶ ಟಿ.** ಇವರು **ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಕಿರುಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಕಿರುಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
**ದಿನಾಂಕ:**

(ಡಾ. ವಾಸುದೇವ ಬಡಿಗೇರ)
ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

# ಅಧ್ಯಾಯ ೧

## ಪ್ರಸ್ತಾವನೆ

ಚರಿತ್ರೆಯು ಬೌದ್ಧಿಕ, ಭೌಗೋಳಿಕ ಜ್ಞಾನಾತ್ಮಕ ಸಂಜೀವಿನಿ ಎಂದರೇ ಅದು ಅತಿಶಯೋಕ್ತಿಯಲ್ಲ. ಅದು ಆಳರಸರ ಉಳ್ಳವರ ಇತಿಹಾಸದ ಕಥೆ ಅಲ್ಲ. ಚರಿತ್ರೆ ಎಂಬುದು ಕಟ್ಟ ಕಡೆಯ ದೇಶಿ ಸೊಗಡಿನ ತಾಯಿ ಬೇರುಗಳ ಮೂಲ ನೆಲೆ ಕಡೆಗೆ. ಮತ್ತು ಸ್ಥಳೀಯ ಸಂಸ್ಕೃತಿಗಳ ಜನ ಇತಿಹಾಸದ ಅಂಚಿನೆಡೆಗೆ ನೋಡುವ ಅಧ್ಯಯನವಾಗಿದೆ. ಮಾನವನ ಚರಿತ್ರೆಯು ತುಂಬಾ ಪ್ರಾಚೀನವಾದುದು. ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರಗೆ ನೋಡಿದಾಗ. ಮಾನವ ಸಾಗಿಬಂದ ಹಂತಗಳು ಅಗಾದವಾದವು. ಕಾಲಾಂತರದೂದ್ದಕ್ಕೂ ಮನುಷ್ಯ ತನ್ನದೇ ಆದ ಸಂಸ್ಕೃತಿಯ ವಿಕಾಸವನ್ನು ಕಂಡುಕೊಳ್ಳುತ್ತಾ ಬಂದಿದ್ದಾನೆ. ಅವನ ಚರಿತ್ರೆಯ ಪಳೆಯುಳಿಕೆಗಳು ನಾನಾ ಮುಖಗಳಲ್ಲಿ ಹರಿದು ಹಂಚಿ ಹೋಗಿವೆ, ಹೀಗೆ ಹರಿದು ಹಂಚಿಹೋದ ಕುರುವುಗಳನ್ನು ಒಂದೆಡೆ ಸೇರಿಸಿದರೆ ಆಯಾ ಕಾಲದ ಸಾಂಸ್ಕೃತಿಕ ಚರಿತ್ರೆ ಕಾಣಸಿಗುತ್ತದೆ. ಒಂದು ಪ್ರದೇಶದ ವಿಶಿಷ್ಟ ಸಾಂಸ್ಕೃತಿಕ ಚರಿತ್ರೆಯನ್ನರಿಯುವ ಕಾರ್ಯ ಒಂದು ಹೊಸ ಆಯಾಮವನ್ನು ಸೃಷ್ಟಿಸಿಕೊಡಬಲ್ಲದು. ಸಮಾಜ ಜೀವಂತವಾಗಿರಲು ಪ್ರಜೆಗಳು ಪ್ರಜ್ಞಾವಂತರಾಗಲು ಸಾಂಸ್ಕೃತಿಕ ಅಧ್ಯಯದ ಪಾಠ ಅವಶ್ಯಕ. ಮನುಷ್ಯನ ಹುಟ್ಟು ಬೆಳವಣಿಗೆಯ ಮೊದಲ ಪಾಠದ ನೋಟ, ಶಿಲಾ ಸಂಸ್ಕೃತಿಗಳ ನೆಲೆಯಿಂದ ನಾಗರಿಕತೆ ಎಡೆಗೆ ಪಯಣಿಸಿದ ಪರಿ. ನಂತರ ತನ್ನ ಜೀವನದ ಸ್ಥಿತ್ಯಂತರದಲ್ಲಿ ಸಂಸ್ಕೃತಿ ಮತ್ತು ಸಾಂಸ್ಕೃತಿಕತೆ ಒಳ ವಿಕಾಸನ ಎಲ್ಲವು ವ್ಯಕ್ತಿ ಜ್ಞಾನ ಪರಿಪಕ್ವತೆಗೆ ಹಿಡಿದ ಕನ್ನಡಿ.

ಒಂದು ನಾಡು ಎಂದರೆ ಅಲ್ಲಿ ಆಳ್ವಿಕೆ ಮಾಡಿದ ಅರಸರಷ್ಟೆ ಅಲ್ಲ ಅಲ್ಲಿನ ಮೂಲ ಕೇಂದ್ರಬಿಂದುಗಳಾದ ಜನ, ಆ ಪ್ರದೇಶದಲ್ಲಿ ಬಾಳಿ ಬದುಕಿದವರ ಅಧ್ಯಯನ, ಒಂದು ನಾಡಿನ ಅಥವಾ ದೇಶದ ನಿಜವಾದ ಇತಿಹಾಸ ಎಂದರೆ ಅದು ಜನತೆಯ ಇತಿಹಾಸ ಅವರು ಬದುಕಿದ ರೀತಿ. ಅನುಸರಿಸಿದ ಧರ್ಮ ಕಟ್ಟಿದ ಕಲೆ. ಅವರ ಜೀವನ ಪದ್ಧತಿ. ಅವರ–ನೀತಿ–ನಿಜಾಯಿತಿ–ಮೌಲ್ಯಗಳು ಸಮಸ್ಸೆಗಳ ವಿವರಣೆಯೇ ಆಗಿದೆ. ನಿರ್ದಿಷ್ಟವಾದ ಒಂದು ದೇಶದ, ಇತಿಹಾಸ ತಿಳಿಯಲು. ಸಾಹಿತ್ಯ, ಚರಿತ್ರೆ, ಸಂಸ್ಕೃತಿ, ದೇವಾಲಯ. ಸ್ಮಾರಕಗಳು. ಶಿಲಾಶಾಸನ ಪ್ರಮುಖ ಪಾತ್ರವಹಿಸುತ್ತವೆ. ಅಧ್ಯಯನಕಾರರು ಇತಿಹಾಸವನ್ನು ಕೇವಲ ಒಂದು ಪ್ರದೇಶವನ್ನಾಳಿದ ರಾಜಮನೆತನಗಳ ಜೀವನ ಸಾಧನೆಗಳನ್ನು ಮಾತ್ರ ಎತ್ತಿಹಿಡಿಯುತ್ತಾರೆ. ಆದರೆ ಇಲ್ಲಿ ವಾಸಿಸಿದ ಸಾಮಾನ್ಯ ಜನರ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವ ಕಡೆಗೆ ಅಧ್ಯಯನವನ್ನು ವಿಸ್ತಾರಗೊಳಿಸಬೇಕಾಗಿರುವುದು. ಈಗಿನ ಅಧ್ಯಯನದ ಗುರಿಯಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನದ ನೆಲೆಗಳು ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ವಿಸ್ತಾರಗೊಳ್ಳುತ್ತಿವೆ. ಈ ರೀತಿಯ ಅಧ್ಯಯನದ ನೆಲೆಗಳಿಂದ ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ವಿಸ್ತರಗೊಳಿಸುವುದರ ಜೊತೆಗೆ ಸ್ಥಳೀಯ ಅನನ್ಯತೆಯನ್ನು ಗುರುತಿಸುವಲ್ಲಿ ಚರಿತ್ರೆಯ ಅಧ್ಯಯನ ಬಹಳ ಮಹತ್ವವಾದುದ್ದು. ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯ ಎಂಬ ಶೀರ್ಷಿಕೆಯ ಅಡಿಯಲ್ಲಿ ಸ್ಥಳೀಯವಾಗಿ ಲಭ್ಯವಿರುವ ಆಕರಗಳು ಹಾಗೂ ಮೌಖಿಕ ಮತ್ತು ಚಾರಿತ್ರಿಕ ಹಿನ್ನೆಯ ಪ್ರಾಚ್ಯವಶೇಷದ ಅಡಿಯಲ್ಲಿ ಈ ಹೋಬಳಿಯ ಸಾಂಸ್ಕೃತಿಕ ಚರಿತ್ರೆ ಕಟ್ಟಿಕೊಡುವುದು ಅಧ್ಯಯನದ ಅವಶ್ಯಕವಾಗಿದೆ.

ಕೂಡ್ಲಿಗಿ ಹೋಬಳಿ ಪರಿಸರದ ಹಿನ್ನೆಲೆಯಲ್ಲಿ ಅಲ್ಲಿನ ಶಾಸನಗಳ ಆಕರಗಳು ಅನುಕೂಲವಾಗಿವೆ. ವಿಜಯನಗರ ಅರಸರು. ಮತ್ತು ಪಾಳೆಗಾರರ ಆಳ್ವಿಕೆ ಅವಧಿಯಲ್ಲಿ ನಿರ್ಮಾಣಗೊಂಡಿರುವ ದೇವಾಲಯಗಳು ಕೆರೆ ಕಟ್ಟೆಗಳು ಕೋಟೆ ಕೊತ್ತಲಗಳು ಶಾಸನಗಳು ಹಾಗೂ ನೊಳಂಬವಾಡಿಯ, ಪ್ರದೇಶವಾ ಕೋಗಳಿನಾಡು ೫೦೦ ಪ್ರದೇಶವಾದ ಕೂಡ್ಲಿಗಿ ಹೋಬಳಿ ಪರಿಸರ ಕಲ್ಯಾಣ ಚಾಲುಕ್ಯರ ಕಾಲದ ಕಲಾಶೈಲಿಯನ್ನು ಕೆಲವೊಂದು ಪ್ರದೇಶದಲ್ಲಿ ಸೂಕ್ಷ್ಮವಾಗಿ ಗಮನಿಸಬಹುದು. ಇಂತವುಗಳ ಜೊತೆ ಮೌಖಿಕ ಆಕರಗಳನ್ನು ಕಲೆಹಾಕುವ ಮೂಲಕ ಒಂದಕ್ಕೊಂದು ಸಂಬಂಧ ಕಲ್ಪಸುವ ಸಲುವಾಗಿ ಕೂಡ್ಲಿಗಿ ಹೋಬಳಿ ಪರಿಸರದ ಅಧ್ಯಯನ ಕಟ್ಟಿಕೊಡಬೇಕಾಗುತ್ತದೆ.

**ಈವರೆಗೆ ಕ್ಷೇತ್ರದ ಬಗ್ಗೆ ನಡೆದಿರುವ ಅಧ್ಯಯನದ ಸಮೀಕ್ಷೆ**

ಪ್ರಸ್ತುತ ಅಧ್ಯಯನದ ಶೀರ್ಷಿಕೆಗೆ ಸಂಬಂಧಿಸಿದಂತೆ ಯಾವುದೇ ಅಧ್ಯಯನ ನಡೆದಿರುವುದಿಲ್ಲ. ಆದರೆ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಎಲ್ಲಾ ಆಯಾಮಗಳಲ್ಲಿ, ಲೇಖನಗಳು, ಕೈಪಿಡಿಗಳು, ಸಂಶೋಧನಾ ಕಾರ್ಯ ಜರುಗಿವೆ. ಮುಖ್ಯವಾಗಿ ಕೂಡ್ಲಿಗಿ ತಾಲ್ಲೂಕು, ಕೂಡ್ಲಿಗಿ ಹೋಬಳಿ, ಕೂಡ್ಲಿಗಿ ಪಟ್ಟಣ ಅನುಲಕ್ಷಿಸಿ. ಈ ಕುರಿತಾಗಿ ಬರಹಗಳು ಮೂಡಿಬಂದಿವೆ.

ಪ್ರಮುಖವಾಗಿ **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ** ವಾಸುದೇವ ಬಡಿಗೇರ, **ಬಳ್ಳಾರಿ ಜಿಲ್ಲಾ ದರ್ಶನ** ಕೆ. ರವೀಂದ್ರನಾಥ, **ಬಳ್ಳಾರಿ ಜಿಲ್ಲೆಯ ಪಾಳೆಗಾರರು** ವಿರೂಪಾಕ್ಷಪ್ಪ ಪೂಜಾರಹಳ್ಳಿ, **ಬಳ್ಳಾರಿ ಜಿಲ್ಲೆಯ ಕೋಟೆಗಳು** ಎಂ. ಕೊಟ್ರೇಶ, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ** ಜೆ.ಎಂ. ನಾಗಯ್ಯ, **ಬಳ್ಳಾರಿ ಜಿಲ್ಲೆಯ ಶಾಸನಗಳು** ಚೆನ್ನಬಸಪ್ಪ ಪಾಟೀಲ್ ಮತ್ತು ವಿನೋದ್ ಪಾಟೀಲ್, **ಬಳ್ಳಾರಿ ಜಿಲ್ಲೆಯ ಮರದ ವಾಸ್ತು** ಸಿ.ಮಹದೇವ, **ಬಳ್ಳಾರಿ ಜಿಲ್ಲೆಯ ದೇವಾಲಯ ಕೋಶ,** ಎಸ್.ವೈ. ಸೋಮಶೇಖರ್, **ಹಂಪಿ ಪರಿಸರದ ಕೆರೆಗಳು,** ಸಿ. ವಾಸುದೇವನ್ ಜೊತೆಗೆ ಕೂಡ್ಲಿಗಿಯ ತಾಲ್ಲೂಕಿನ ಕುಮತಿ, ಹುಲಿಕುಂಟೆ ಕೆರೆಯ ವಿವರ ನೀಡಿದ್ದಾರೆ. ಹಾಗೆ ಕೂಡ್ಲಿಗಿ ತಾಲ್ಲೂಕಿಗೆ ಸಂಬಂಧಿಸಿದಂತೆ, ಕೆಲವು ಬಿಡಿ ಲೇಖನ, ಪರಿಚಯದ ಕೈಪಿಡಿ, ಸ್ಮರಣ ಸಂಚಿಕೆಗಳು ಪ್ರಕಟಗೊಂಡಿವೆ.

ಅದರಲ್ಲಿ ಕೂಡ್ಲಿಗಿ ತಾಲ್ಲೂಕಿಗೆ ಪೂರಕವಾಗಿ ಕೆಲವು ವಿದ್ವಾಂಸರು, ಪುರಾತತ್ವ ಸಂಶೋಧಕರು, ಸಂಶೋಧನೆ ಕೈಗೊಂಡಿದ್ದು, ಕೂಡ್ಲಿಗಿ ತಾಲ್ಲೂಕಿನ ಪ್ರಾಚೀನತೆ, ರಾಜಕೀಯ ಚರಿತ್ರೆ, ಐತಿಹಾಸಿಕ ಸ್ಥಳಗಳ ಪರಿಚಯ, ಶಿಲಾಶಾಸನಗಳು, ಕೋಟೆ ಕೊತ್ತಳ, ವೀರಗಲ್ಲುಗಳ ಕುರಿತಾದ ಅಧ್ಯಯನ, ಕೆಲವು ನಿರ್ದಿಷ್ಠ ಪ್ರದೇಶಗಳ ಸ್ಥಳ ಅಧ್ಯಯನ, ಗ್ರಾಮ ಅಧ್ಯಯನ, ದೈವದ ಆರಾಧನೆಯ ಅಧ್ಯಯನ, ಚಾರಿತ್ರಿಕ ಅಧ್ಯಯನ ನಡೆದಿದ್ದು, ಅವು ಈ ರೀತಿ ಉಲ್ಲೇಸಬಹುದು.

ವಿಜಯಕುಮಾರ್ ಆರ್. **ಮೊರಬದ ಶ್ರೀ ವೀರಭದ್ರೇಶ್ವರ ಸ್ವಾಮಿಯ: ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಎಂ.ಫಿಲ್. ಕಿರುಪ್ರಬಂಧ ರಚಿಸಿದ್ದಾರೆ. ರಮೇಶ್. ಕೆ, **ಉಜ್ಜಿನಿ ಗ್ರಾಮಾಧ್ಯಯನ** ಎಂಬ ಎಂ.ಫಿಲ್ ಕಿರುಪ್ರಬಂಧ ಗ್ರಾಮದ ಹಿನ್ನೆಲೆ ಒಳಗೊಂಡಿದೆ. ಬಸವರಾಜ. ಕೆ ಎಂಬುವರು **ಕೊಟ್ಟೂರು ಗ್ರಾಮಾಧ್ಯಾಯನ** ಎನ್ನುವ ಶೀರ್ಷಿಕೆ ಅಡಿಯಲ್ಲಿ ಸಂಶೋಧನ ಪ್ರಂಬಂಧ ರಚಿಸಿದ್ದಾರೆ. ಬಸವರಾಜ್ ಎಚ್. ಸಂಶೋಧಕರು **ಗುಡೇಕೋಟೆ: ಒಂದು ಚಾರಿತ್ರಿಕೆ ಅಧ್ಯಯನ** ಎಂಬ ಎಂ.ಫಿಲ್ ಕಿರುಪ್ರಬಂಧ ರಚಿಸಿದ್ದಾರೆ. ಗೋವಿಂದಪ್ಪ, ಈ. ಎಂಬುವರು **ಕೂಡ್ಲಿಗಿ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು** ಎಂಬ ಅಪ್ರಕಟಿತ ಎಂ.ಫಿಲ್. ಪ್ರಬಂಧ ಕಾರ್ಯ ಕೈಗೊಂಡಿದ್ದಾರೆ.

ಕೆಲವು ಪ್ರಕಟಿತ ಕೃತಿಗಳಲ್ಲಿ ವೃಷಬೇಂದ್ರ ಆಚಾರ್ ಅವರ **ಮುನ್ನಡೆಯ ಕೂಡ್ಲಿಗಿ,** ಚಂದ್ರಶೇಖರಯ್ಯ ಬಿ.ಎಮ್. ಇವರ **ಕೂಡ್ಲಿಗಿ ತಾಲ್ಲೂಕು ದರ್ಶನ** ಪುಸ್ತಕ ಅನಾವರಣಗೊಂಡಿವೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರು **ಬೇಡಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ ಹಾಗೂ ವಾಲ್ಮೀಕಿ** ಸಿರಿ ಎಂಬ ಸಂಪಾದಕ ಪುಸ್ತಕ ಹೊರತಂದಿದ್ದಾರೆ. ಲಕ್ಷ್ಮಣ್ ತೆಲಗಾವಿ ಅವರ **ಜರಿಮಲೆ ಸಂಸ್ಥಾನದ ವಂಶಾವಳಿ** ಜರ್ಮಲಿ ಅರಸರ ವಂಶಾವಳಿ ಮಾಹಿತಿ ನೀಡುತ್ತದೆ. ಬಿಡಿಲೇಖನ ಮಾಡಿದ್ದಾರೆ. ಜಯಣ್ಣ ಉಲ್ಲಾನಹಳ್ಳಿ ಅವರ **ಕೂಡ್ಲಿಗಿ ತಾಲ್ಲೂಕಿನ ಪುರಾತತ್ವ ನೆಲೆಗಳು,** ಹೆಚ್. ತಿಪ್ಪೇಸ್ವಾಮಿ ಅವರ **ಕೂಡ್ಲಿಗಿ ತಾಲ್ಲೂಕಿನ ಅಪರೂಪದ ಮಾನವಾಕೃತಿಗಳು,** ಎಸ್.ಡಿ. ಈರಗಾರ ಅವರ **ಕೂಡ್ಲಿಗಿ ತಾಲ್ಲೂಕಿನ ಬೇಡ ಜನಾಂಗದ ಸ್ಥಿತಿಗತಿ** ಲೇಖನ ಹೊರಬಂದಿವೆ. ಅರುಣ್ ಜೋಳದ ಕೂಡ್ಲಿಗಿ **ಕೊಟ್ಟೂರು ಪರಿಸರದ ವಾಲ್ಮೀಕಿ ಸಮುದಾಯ ಬದುಕು ಮತ್ತು ಸಂಘರ್ಷದ** ಸ್ವರೂಪ ವಿಷಯ ಸಂಪಾದನ ಮಾಡಿದ್ದಾರೆ. ಟಿ. ಕೊತ್ತಮ್ಮ ಅವರು **ಕೂಡ್ಲಿಗಿ ತಾಲ್ಲೂಕಿನ ಬೇಡ ಜನಾಂಗದ ರಂಗನಟಿಯರು** ಲೇಖನ ಜೊತೆಗೆ **ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ** ಮಹಾಪ್ರಬಂಧ ರಚಿಸಿದ್ದಾರೆ.

ಕೂಡ್ಲಿಗಿ ಹೋಬಳಿಗೆ ಅನ್ವಯಿಸಿ– ಎಸ್.ವೈ. ಸೋಮಶೇಖರ್ **ವೀರನದುರ್ಗದ ಕೋಟೆ** ಮತ್ತು ವೆಂಕಟಗಿರಿಯಪ್ಪ ಕೂಡ ವೀರನದುರ್ಗದ ಮೇಲೆ ಪರಿಚಯ ಲೇಖನ ರೂಪಿಸಿದ್ದಾರೆ. ಈ ಎಲ್ಲಾವುಗಳು ಕೂಡ್ಲಿಗಿ ತಾಲ್ಲೂಕು, ಕೂಡ್ಲಿಗಿ ಹೋಬಳಿಗೆ ಸಂಬಂಧಿಸಿದ ಕೆಲವು ಸಂಶೋಧನಾ ಬರಹಗಳು ಮೂಡಿಬಂದಿವೆ.

ಆದರೂ, ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಕೂಡ್ಲಿಗಿ ತಾಲ್ಲೂಕಿನ ರಾಜಕೀಯ ಚರಿತ್ರೆ, ಪ್ರಾಗಿತಿಹಾಸ ನೆಲೆಗಳು, ಐತಿಹಾಸಿಕ ಸ್ಥಳಗಳ ಪರಿಚಯಾತ್ಮಕ ಅಧ್ಯಯನಗಳು ನಡೆದಿವೆಯೇ ಹೊರತು ಇಡಿ ಕೂಡ್ಲಿಗಿ ಹೋಬಳಿ ಪರಿಸರದ ಬಗ್ಗೆ ವ್ಯವಸ್ಥಿತವಾದ ಚಾರಿತ್ರಿಕತೆ ಒಳಗೊಂಡ ಸಾಂಸ್ಕೃತಿಕ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು.

## ಅಧ್ಯಯನದ ಉದ್ದೇಶ

ಪ್ರಾಚೀನ ಸ್ಮಾರಕಗಳು ಮತ್ತು ಪ್ರಾಚ್ಯಾವಶೇಷಗಳು ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದ್ದು ಅವುಗಳ ಅಧ್ಯಯನವು ಇತಿಹಾಸದ ಪುನರ್‌ನಿರ್ಮಾಣಕ್ಕೆ ಪ್ರಮುಖ ದತ್ತಾಂಶವಾಗಿವೆ. ಈ ತರಹದ ಆಕರಗಳಿಂದ ಕೂಡ್ಲಿಗಿ ಹೋಬಳಿಯ ಪ್ರಾಚೀನ ಅವಶೇಷಗಳನ್ನು ಒಳಗೊಂಡಿರುವ ಸಮಗ್ರ ಅಧ್ಯಯನ ನಡೆದಿರುವುದಿಲ್ಲ ವೆಂಬುದು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ ಮೂಲಕ ಕಂಡುಕೊಂಡು ಸಂಪೂರ್ಣ ಮಾಹಿತಿಯ ಕೊರತೆ ನೀಗಿಸಲು ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ ಮಾಡುವ ಕಾರ್ಯಕ್ಕೆ ಮುಂದಾಗಿರುವುದು ಇಲ್ಲಿನ ಪ್ರಮುಖ ಉದ್ದೇಶವಾಗಿದೆ.

ಕೂಡ್ಲಿಗಿ ಹೋಬಳಿ ಪರಿಸರ ಅಧ್ಯಯನದ ವ್ಯಾಪ್ತಿಯಲ್ಲಿ ಬರುವಂತಹ ಎಲ್ಲಾ ಸ್ಥಳಗಳಿಗೂ ಪ್ರತ್ಯಕ್ಷವಾಗಿ ಭೇಟಿನೀಡಿ ಅಧ್ಯಯನಕ್ಕೆ ಪೂರಕವಾದ ಪ್ರಮುಖ ಅಂಶಗಳನ್ನು ಸಂಗ್ರಹಿಸಿ, ಅವುಗಳನ್ನು ಪಟ್ಟಿಮಾಡಿ, ಅವುಗಳನ್ನು ಸ್ಥೂಲ ಅಧ್ಯಯಕ್ಕೆ ಒಳಪಡಿಸಿ, ಅವುಗಳ ವೈಜ್ಞಾನಿಕ, ವೈಚಾರಿಕ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಹಾಗೂ ಸ್ಥಳೀಯ ಜನರಲ್ಲಿನ ಅಭಿಪ್ರಾಯ ಪರಿಗಣಿಸಿ ಕೂಡ್ಲಿಗಿ ಹೋಬಳಿ ಪರಿಸರ ವ್ಯಾಪ್ತಿಯಲ್ಲಿ ಬರುವ ಐತಿಹ್ಯಗಳು, ಜನಪದ ನಂಬಿಕೆಗಳು, ಸ್ಥಳಪುರಾಣಗಳ ಬಗ್ಗೆ ವಿಶ್ಲೇಷಣೆ ಮಾಡುವುದು ಮೂಲ ಉದ್ದೇಶವಾಗಿದೆ.

ಇಲ್ಲಿನ ಪ್ರಾಚ್ಯವಶೇಷಗಳು ಇತಿಹಾಸದ ಪುನರ್‌ನಿರ್ಮಾಣಕ್ಕೆ ನೆರವಾಗುವುದರಿಂದ ಅವುಗಳ ಮಹತ್ವ ಸ್ಥಳೀಯ ಜನರಿಗೆ ತಿಳಿಸುವ ಜೊತೆಗೆ ಅವುಗಳ ಸಂರಕ್ಷಣೆಗೆ ಜನರನ್ನು ಜಾಗೃತ ಗೊಳಿಸುವ ಕೆಲಸ ಈ ಅಧ್ಯಯನದ ನಿಟ್ಟಿನಲ್ಲಿ ಮಹತ್ವದೆನೆಸಿದೆ. ಕೂಡ್ಲಿಗಿ ಹೋಬಳಿ ಪರಿಸರದ ಸಾಮಾಜದ ಸಂಸ್ಕೃತಿಯ ಬಗ್ಗೆ ಸಮಗ್ರ ಅಧ್ಯಯನ ಮಾಡುವ  ಮೂಲಕ ಸಾಂಸ್ಕೃತಿಕ ಚಿತ್ರಣವನ್ನು ಅನಾವರಣಗೊಳಿಸುವ ಉದ್ದೇಶವಾಗಿದೆ.

ಸಮಗ್ರ ಕರ್ನಾಟಕ ಇತಿಹಾಸ ಮತ್ತು ಪುರಾತತ್ವದ ಪ್ರಾಚ್ಯವಶೇಷಗಳ ಅಧ್ಯಯನದ ವಿಭಾಗದಲ್ಲಿ ನಿರ್ಲಕ್ಷಕ್ಕೆ ಒಳಗಾಗಿರುವ ಕೂಡ್ಲಿಗಿ ಹೋಬಳಿ ಪರಿಸರವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಚರಿತ್ರೆಯನ್ನು ನಿರ್ಮಿಸಿ ಕೊಡುವ, ಪ್ರಾಚ್ಯ ನೆಲೆಗಳನ್ನ ಕಂಡುಕೊಳ್ಳುವ ಚಾರಿತ್ರಿಕ ಕಾಲಘಟ್ಟದಲ್ಲಿ ನಿರ್ಮಾಣವಾದ ಎಲ್ಲಾ ಬಗೆಯ ಸ್ಮಾರಕಗಳನ್ನು ಅರಸುಮನೆತನಗಳನ್ನು ಹಾಗೆ ಸಮಾಜ ಸಂಸ್ಕೃತಿ ಕುರಿತಾದ ಅಧ್ಯಯನ ಮಾಡುವ ದ್ಯೆಯೋದ್ದೇಶ ದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ, ಒಟ್ಟಾರೆಯಾಗಿ ಪ್ರಾಚ್ಯಾವಶೇಷಗಳ ಕುರುವುಗಳನ್ನು ಆಧರಿಸಿ ಸೀಮಿತ ಗಡಿ ರೇಖೆ ಆಯ್ದುಕೊಂಡು ಅಧ್ಯಯನ ಮಾಡಿದಲ್ಲಿ ಅದು ವಸ್ತುನಿಷ್ಠ ಅಧ್ಯಯನವಾಗುತ್ತದೆ, ಈ ದಾರಿಯೊಳಗೆ ಕೂಡ್ಲಿಗಿ ಹೋಬಳಿ ಪರಿಸರ ಸೀಮಿತಗೊಳಿಸಿಕೊಂಡು ಅಧ್ಯಯನ ಮಾಡಲಾಗುವುದು.

## ಅಧ್ಯಯನದ ವ್ಯಾಪ್ತಿ

ನಿರ್ದಿಷ್ಟವಾಗಿ ಯಾವುದೇ ಒಂದು ಸಂಶೋಧನೆ ಸ್ಪಷ್ಟವಾಗಿ ಯಶಸ್ವಿಯಾಗಬೇಕಾದರೆ ಅದಕ್ಕೆ ತನ್ನದೆ ಆದ ವ್ಯಾಪ್ತಿ ಚೌಕಟ್ಟು ಇರಬೇಕಾದುದ್ದು ಅತಿ ಮುಖ್ಯವಾದುದು ಪ್ರಸ್ತುತ ಅಧ್ಯಯನ ಶೀರ್ಷಿಕೆ ಸೂಚಿಸುವಂತೆ ಕೂಡ್ಲಿಗಿ ಹೋಬಳಿ ಪರಿಸರಕ್ಕೆ ಮಾತ್ರ ಸೀಮಿತವಾಗಿದೆ, ಆದರೂ. ಸಹ ಅವಶ್ಯಕತೆಗೆ ಅನುಗುಣವಾಗಿ ಈ ಪ್ರದೇಶದಕ್ಕೆ ಸಂಬಂಧಿಸಿದೆ ಕೆಲವು ಪ್ರಮುಖ ಸ್ಥಳಗಳನ್ನು ಪ್ರಾಸಂಗಿಕವಾಗಿ ಅಧ್ಯಯನಿಸಲಾಗಿದೆ. ಕೂಡ್ಲಿಗಿ ಹೋಬಳಿ ಪರಿಸರದಲ್ಲಿ ೩೦ ಹಳ್ಳಿ ಗ್ರಾಮಗಳದ್ದು. ಅವುಗಳಲ್ಲಿ ಪ್ರಮುಖ ಚಾರಿತ್ರಿಕ ಗ್ರಾಮಗಳ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಈ ಹೋಬಳಿಯ ಪರಿಸರದ ಸುತ್ತಮುತ್ತ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಸತಿ ತಾಣಗಳಿದ್ದು, ಇತಿಹಾಸ ಕಾಲದ ಆರಂಭದಿಂದ ವಿಜಯನಗರ ಮತ್ತು ಪಾಳೆಗಾರ, ಬ್ರಿಟಿಷರನ್ನು ಒಳಗೊಂಡಂತೆ ಕಾಲದ ವರೆಗಿನ ಅನೇಕ ದೇವಾಲಯಗಳು, ಶಾಸನಗಳು, ಕೋಟೆ-ಕೊತ್ತಲ ಮುಂತಾದ ಸ್ಮಾರಕ ಅವಶೇಷಗಳು ಕಂಡುಬರುತ್ತವೆ. ಇವುಗಳನ್ನು ಕಾಲಮಾನನ ಚೌಕಟ್ಟಿನಲ್ಲಿ ಸಾಂಧರ್ಭಿಕ ವಿಷಯಗಳಿಗನುಗುಣವಾಗಿ ಸಾಂಸ್ಕೃತಿಕ ಸಂಗತಿಗೆ ಅನ್ವಯಿಸಿಕೊಂಡು ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ವಿಧಾನ

ಒಂದು ಕಾರ್ಯ ಯಶಸ್ವಿಯಾಗ ಬೇಕಾದರೆ, ಕ್ರಮಬದ್ಧತೆ ಅತೀ ಮುಖ್ಯ, ಇದಕ್ಕಾಗಿ ಸಂಶೋಧನಾ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯಕವಾದುದ್ದು. ಮುಖ್ಯವಾಗಿ ಇಲ್ಲ ಸಾಂಸ್ಕೃತಿಕ ಅಧ್ಯಯನದ ಹಿನ್ನೆಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಕ್ಷೇತ್ರಕಾರ್ಯ ಆಧಾರಿತ ಅಂಶ ಕೂಡಿದ್ದು. ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರತಿಯೊಂದು ಗ್ರಾಮ ಅಥವಾ ಪ್ರದೇಶಗಳಿಗೆ ನೇರವಾಗಿ ಬೇಟಿ ನೀಡಿ ದೊರೆಯು ಸಂಪನ್ಮೂಲ ಅವಶೇಷಗಳನ್ನು ಅವಲೋಕಿಸಿ.

ಪಾರಮಾರ್ಷಿಸಿ ಎಲ್ಲಾ ಬಗೆಯ ಸರಕಾರಿ ಕಾಗದ ಪತ್ರಗಳು ಲೇಖನಗಳು ನಿಯತಕಾಲಿಕೆಗಳಲ್ಲಿ ದೊರೆಯುವ ಆಧಾರಗಳನ್ನು ಸಂಶೋಧನಾ ಲೇಖನಗಳನ್ನು ಹಾಗೂ ಪಿಎಚ್.ಡಿ, ಎಂ.ಫಿಲ್ ಮಹಾ ಪ್ರಬಂಧ, ಕಿರುಪ್ರಬಂಧಗಳನ್ನು ಆಧರಿಸಿ ಅವಶ್ಯಕ ಅಂಶಗಳನ್ನು ವಿಷಯನುಸಾರ ವಿಮರ್ಶಿಸಿ, ವಿಶ್ಲೇಷಿಸಿ, ಸಂಯೋಜಿಸಿ ದಾಖಲಿಸಿಕೊಳ್ಳಲಾಗಿದೆ. ಹಾಗೆ ಪ್ರಾಥಮಿಕ ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಈ ಪರಿಸರ ವ್ಯಾಪ್ತಿಯಲ್ಲಿ ಬರುವ ಪ್ರದೇಶದ ಹಿರಿಯರ ಪ್ರಮುಖರ ಸಂಪನ್ಮೂಲ ವ್ಯಕ್ತಿಗಳ ಭೇಟಿ ಮಾಡಿ ಚರ್ಚಿಸಿ, ವಿಷಯ ಸಂಗ್ರಹಿಸಿ ಅಂತರ್‌ಶಿಸ್ತೀಯ ಅಧ್ಯಯನ ಮೂಲಕ ಸಾಂಸ್ಕೃತಿಕ ಚರಿತ್ರೆ ನಿರೂಪಿಸಲಾಗುವುದು.

## ಅಧ್ಯಯನದ ಸ್ವರೂಪ

ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ ಎನ್ನುವ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ೫ ಅಧ್ಯಯಗಳಾಗಿ ವಿಭಾಗಿಸಲಾಗಿದೆ ಈ ಮೂಲಕ ಸಂಪ್ರಬಂಧದ ರಚಾನಾ ಕಾರ್ಯ ಕೈಗೊಳ್ಳಲಾಗುವುದು.

## ಮೊದಲನೇ ಅಧ್ಯಾಯದಲ್ಲಿ

ಶೀರ್ಷಿಕೆಗೆ ಸಂಬಂಧಿಸಿದಂತೆ ಪ್ರಸ್ತಾವನೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಸೇರಿಸಲಾಗಿದೆ ಹಾಗೂ ವಿಷಯಕ್ಕೆ ಪೂರಕವಾಗಿ ಈವರೆಗಿನ ನಡೆದಿರುವಂತಹ ಅಧ್ಯಯನ ಸಮೀಕ್ಷೆಯನ್ನು ಮತ್ತು ವಿಧಾನ ಚರ್ಚಿಸಲಾಗುವುದು.

## ಎರಡನೇ ಅಧ್ಯಾಯದಲ್ಲಿ

ಕೂಡ್ಲಿಗಿ ಹೋಬಳಿಯ ಪರಿಸರದ ಸಾಂಸ್ಕೃತಿಕ ಅಧಯನದಲ್ಲಿ ಇಲ್ಲಿನ ಭೌಗೋಳಿಕ, ಸನ್ನಿವೇಶಗಳು ಸಾಂಸ್ಕೃತಿಕ ಅಧ್ಯಯನ ನಿರ್ಮಾಣಲ್ಲಿ ಹೇಗೆ ಪೂರಕವಾಗಿವೆ. ಮುಖ್ಯವಾಗಿ ಭೌಗೋಳಿಕ ಅಂಶಗಳಾದ, ಭೂವಿಸ್ತರಣೆ, ಹವಾಗುಣ, ಜನಸಂಖ್ಯೆ ಮಣ್ಣು ಜಲಸಂಪತ್ತು ಮುಂತಾದ ವಿಷಯ ಪರಿಶೀಲನೆ, ಜೊತೆ ಪ್ರಾಗಿತಿಹಾಸಕಾಲದ ನೆಲೆಗಳು ಪೌರಾಣಿಕ ಹಿನ್ನೆಲೆ, ಸ್ಥಳನಾಮಗಳು, ಚಾರಿತ್ರಿಕ ಅಂಶಗಳು. ಇಲ್ಲಾಳಿದ ಪ್ರಮುಖ ಅರಸು ಮನೆತನಗಳು. ಅಲ್ಲಿನ ಶಾಸನ ಸ್ಮಾರಕಗಳು, ವೀರಗಲ್ಲುಗಳ ಆಕರಗಳ ಹಿನ್ನೆಲೆಯಲ್ಲಿ ರಾಜಕೀಯ ಇತಿಹಾಸ ಪ್ರಸ್ತಾಪಿಸಲಾಗುವುದು. ಕೂಡ್ಲಿಗಿ ಹೋಬಳಿ ಪರಿಸರದ ಸ್ಥಳನಾಮ ಮತ್ತು ಸ್ಥಳಪುರಾಣಗಳ ವಿವರಣೆಯಲ್ಲಿ ಸ್ಥಳ ನಾಮಗಳ ಉಲ್ಲೇಖ ನೀಡಲಾಗುವುದು.

**ಮೂರನೇ ಅಧ್ಯಾಯದಲ್ಲಿ**

ಕೂಡ್ಲಿಗಿ ಹೋಬಳಿ ಪರಿಸರದ ಸ್ಮಾರಕಗಳಾದ ದೇವಾಲಯಗಳು ಮೂರ್ತಿಶಿಲ್ಪ, ಕೋಟೆ ಕೊತ್ತಳೆ, ವೀರಗಲ್ಲು ಕೆರೆ ಕಟ್ಟೆಗಳ ನಿರ್ಮಾಣ ಮಾಡಿದ ಹಿನ್ನೆಲೆ ಅವುಗಳ ಕಲೆ ಮತ್ತು ವಾಸ್ತುಶಿಲ್ಪ ಅವುಗಳ ಮಹತ್ವ ಬೆಳವಣಿಗೆ ಈ ಅಧ್ಯಯ ವ್ಯಾಪ್ತಿಯಲ್ಲಿ ಕಂಡುಬರುವ ಶೈವ, ವೈಷ್ಣವ, ಮತ್ತು ಶಾಕ್ತ ದೇವಾಲಯಗಳ ನಿರ್ಮಾಣ, ಅವುಗಳ ಕುರಿತಾದ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಲಾಗುವುದು. ಜೊತೆಯಲ್ಲಿ ಶಾಸನಗಳ ಕಾಲಮಹತ್ವ ಒಳಗೊಂಡಿರುವ ವಿವರಗಳು ಶಾಸನಗಳ ವಿಧಗಳಾದ ಶಿಲಾಶಾಸನಗಳು ವೀರಗಲ್ಲುಗಳು. ಮುಂತಾದ ಸಮಗ್ರ ಚಿತ್ರಣ ಈ ಅಧ್ಯಯದಲ್ಲಿ ಚರ್ಚಿಸಲಾಗುವುದು.

**ನಾಲ್ಕನೇ ಅಧ್ಯಾಯದಲ್ಲಿ**

ಕೂಡ್ಲಿಗಿ ಹೋಬಳಿ ಪರಿಸರದಲ್ಲಿನ ನಂಬಿಕೆ ಆಚರಣೆಗೆ ಸಂಬಂಧಿಸಿದಂತೆ ಸಮಾಜದ ಸಂಸ್ಕೃತಿಯ ಬಗ್ಗೆ ಮಾಹಿತಿ ಜೊತೆ ಅಲ್ಲಿನ ಸಾಮಾಜಿಕ ಧಾರ್ಮಿಕ, ಆರ್ಥಿಕ ಅಂಶಗಳನ್ನೊಳಗೊಂಡಂತೆ ಕೂಡ್ಲಿಗಿ ಹೋಬಳಿ ಪರಿಸರದಲ್ಲಿ ಕಂಡುಬರುವ ನಂಬಿಕೆ, ಆಚರಣೆ ಹಬ್ಬ – ಹರಿದಿನಗಳು, ಜಾತ್ರೆ, ಉತ್ಸವಗಳ ವಿಷಯವಾಗಿ ಸಾಂಸ್ಕೃತಿ ವೈಶಿಷ್ಟ್ಯದ ಮೂಲಕ ಜನರ ಜೀವನ ಶೈಲಿಯನ್ನು ಕಟ್ಟಿಕೊಡಲಾಗುವುದು.

**೫ನೇ ಅಧ್ಯಾಯದಲ್ಲಿ**

ಸಮರೋಪ ಭಾಗವಾಗಿದ್ದು, ಈ ಕೊನೆಯ ಘಟ್ಟ ಒಟ್ಟಾರೆ ನನ್ನ ಅಧ್ಯಯನದ ಫಲಿತಗಳನ್ನು ಹೇಳಲಾಗುವುದು. ಇದರಲ್ಲಿ ಸಂಶೋಧನಾ ಕಾರ್ಯ ಕೈಗೊಂಡ ಮತ್ತು ಗಮನಕ್ಕೆ ಬಂದ ಅನೇಕ ಅಂಶಗಳನ್ನು ಕುರಿತು ಆಲೋಚಿಸಿ ಚರ್ಚಿಸಲಾಗುವುದು. ಜೊತೆಗೆ ಅನುಬಂಧದಲ್ಲಿ ಆಕರ ಗ್ರಂಥ, ನಕ್ಷೆ, ತಲನಕ್ಷೆ ಮತ್ತು ಛಾಯಾಚಿತ್ರಗಳನ್ನು ಅಳವಡಿಸಿ ಕ್ಷೇತ್ರಕಾರ್ಯವನ್ನು ಕೈಗೊಂಡಿದ್ದೇನೆ.

# ಅಧ್ಯಾಯ ೨

# ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

## ಭೌಗೋಳಿಕತೆ

ಯಾವುದೇ ಒಂದು ಪ್ರದೇಶದ ಬಗ್ಗೆ ಸಂಶೋಧನೆ ಕಾರ್ಯ ಕೈಗೊಳ್ಳಬೇಕಾದರೆ ಪ್ರಮುಖವಾಗಿ ಅಲ್ಲಿನ ಭೌಗೋಳಿಕ ಪರಿಸರದ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳಬೇಕಾದದ್ದು ತುಂಬಾ ಅತ್ಯವಶ್ಯಕ. ಭೌಗೋಳಿಕ ಅಂಶಗಳು, ಸಮಾಜದ ಮೇಲೆ ಅಪಾರ ಪ್ರಭಾವ ಬೀರುತ್ತವೆ. ಇದರೊಂದಿಗೆ ಅಲ್ಲಿನ ಚರಿತ್ರೆ ಮತ್ತು ಭೌಗೋಳಿಕತೆ ಅನ್ಯೋನ್ಯತೆಯ ಸಂಬಂಧ ಹೊಂದಿರುತ್ತವೆ. ಭೂಗೋಳದ ಅರಿವಿಲ್ಲದೆ ಚರಿತ್ರೆ ರಚನೆ ತುಂಬಾ ಕ್ಲಿಷ್ಟಕರ, ಅದೇ ರೀತಿ ಭೌಗೋಳಿಕ ಅಂಶಗಳು ಪ್ರಭಾವ ಬೀರದ ಪ್ರದೇಶಗಳಿಲ್ಲ, ಪ್ರತಿಯೊಂದು ಚರಿತ್ರೆ, ಸನ್ನಿವೇಶ, ಸ್ಮಾರಕ ಹಾಗೂ ಅವಶೇಷಗಳ ಮೇಲೆ ಪ್ರಭಾವ ಇದ್ದೇ ಇರುತ್ತದೆ.

ಒಂದು ನಿರ್ದಿಷ್ಟ ಪ್ರದೇಶದ ಅಧ್ಯಯನದಲ್ಲಿ, ಭೌಗೋಳಿಕ ಹಿನ್ನೆಲೆಯ ವಿಷಯ ಬಹಳ ವಿಶಾಲವಾದದ್ದು, ಮೇಲಾಗಿ ಸಾಕಷ್ಟು ವಿಷಯ ಮೈಗೂಡಿಸಿಕೊಂಡಿದೆ. ಭೂಮಿಯು ಮಾನವನ ವಾಸಸ್ಥಾನವಾಗಿದ್ದು, ಅದು ಹೊಂದಿರುವ ಭೌತಿಕ ಹಾಗೂ ಜೈವಿಕಾಂಶಗಳನ್ನು ಕುರಿತು ವಿಸ್ತೃತ ಅಧ್ಯಯನವನ್ನು ಒಳಗೊಂಡಿದೆ. ವೈವಿಧ್ಯಮಯ ಭೂ ಸ್ವರೂಪಗಳು ಜಲರಾಶಿ ಸಸ್ಯ ಮತ್ತು ಪ್ರಾಣಿವರ್ಗ ಅವನ್ನು ಸುತ್ತುವರೆದಿರುವ ವಾಯುಮಂಡಲ, ಪ್ರಾಕೃತಿಕ, ಭೌಗೋಳಿಕ ಹಿನ್ನೆಲೆ ಒಳಗೊಂಡಿವೆ. ಇವು ಸ್ವಾಭಾವಿಕ ಪರಿಸರವನ್ನು ಸೃಷ್ಟಿಸುವುದರ ಜೊತೆಗೆ ಮಾನವ ಜೀವನ ಕ್ರಮವನ್ನು ನಿರ್ಧರಿಸುತ್ತವೆ. ಮಾನವನ ಬದುಕಿನ ಮೇಲೆ ಗಾಢ ಪ್ರಭಾವ ಬೀರುತ್ತವೆ. ಆದಿಮೂಲ ಮಾನವ ಬದುಕುವುದಕ್ಕಾಗಿ ಅನುಕೂಲಕರ ಭೌಗೋಳಿಕ ಪರಿಸರವನ್ನು ಶೋಧಿಸಿ, ಅಲ್ಲಿ ನೆಲೆಯೂರುತ್ತಿದ್ದ ಯಾವ ಪ್ರದೇಶ ಪ್ರಾಕೃತಿಕ ಸಂಪತ್ತು ಹೇರಳವಾಗಿರುತ್ತದೋ, ಅದು ತುಂಬಾನೇ ಅಭಿವೃದ್ಧಿ ಹೊಂದುತ್ತದೆ. ಆ ಪ್ರದೇಶದ ಪರ್ವತಶ್ರೇಣಿ, ಬೆಟ್ಟಗುಡ್ಡ, ಮಳೆಯ ಪ್ರಮಾಣ, ಹವಾಗುಣ, ಉಷ್ಣಾಂಶ, ಕಾಡು, ಪ್ರಾಣಿವರ್ಗ ಮುಂತಾದ ಭೌಗೋಳಿಕ ಅಂಶಗಳು, ಮನುಷ್ಯನನ್ನು ಆ ಪ್ರದೇಶದಲ್ಲಿ ವಾಸಿಸುವಂತೆ ಒಂದು ವ್ಯವಸ್ಥೆ ನಿರ್ಮಾಣ ಮಾಡಿಕೊಡುತ್ತದೆ.

ಅದೇ ರೀತಿ ಉತ್ತಮ ಭೌಗೋಳಿಕ ಪರಿಸರ ಆ ಪ್ರದೇಶದ ನೈಸರ್ಗಿಕ ಸಂಪತ್ತನ್ನು ಹೆಚ್ಚಿಸಿ, ಜನಜೀವನ, ನಾಗರಿಕತೆ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪದ ಅಭಿವೃದ್ಧಿಗೆ ಅನುವು ಮಾಡಿಕೊಡುತ್ತದೆ. ಪ್ರಮುಖ ಪ್ರಾಚೀನ ನಾಗರಿಕತೆಗಳು ಬೆಳೆದುಬಂದದ್ದು, ನದಿಬಯಲಿನ ಪ್ರದೇಶದಲ್ಲಿ. ಇವು ಅವನ ನಾಗರಿಕತೆ ಮತ್ತು ಸಂಸ್ಕೃತಿ ಮೂಡಿಬರಲು ಕಾರಣವಾದವು.

ಈ ಅಂಶವನ್ನು ಗಮನಹರಿಸಿ ಪ್ರಸ್ತುತ ಅಧ್ಯಯನ ಕೂಡ್ಲಿಗಿ ಹೋಬಳಿ ಪರಿಸರದ ಭೌಗೋಳಿಕ ಅಂಶಗಳು ಮಾನವನ ಜೀವನದ ಮೇಲೆ ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಬಳ್ಳಾರಿ ಜಿಲ್ಲೆಯ ೮ ತಾಲ್ಲೂಕುಗಳ ವಿಸ್ತೀರ್ಣದಲ್ಲಿ ಕೂಡ್ಲಿಗಿ ತಾಲ್ಲೂಕು ಅತಿದೊಡ್ಡ ತಾಲ್ಲೂಕು ಎನಿಸಿದೆ. ಇದರ ವಿಸ್ತೀರ್ಣ ೧,೫೯,೭೦೬ ಹೆಕ್ಟೇರುಗಳು ಇದರಲ್ಲಿ ನಾಲ್ಕು ಹೋಬಳಿ(ಫಿರ್ಕಾ)ಗಳಿವೆ. ಕೂಡ್ಲಿಗಿ, ಕೊಟ್ಟೂರು, ಗುಡೇಕೋಟೆ ಹಾಗೂ ಖಾನಾಹೊಸಳ್ಳಿ.[೧]

ಕೂಡ್ಲಿಗಿ ಹೋಬಳಿ ಪ್ರದೇಶ ಭಾರತದ ದಖ್ಖನ್ ಪ್ರಸ್ಥಭೂಮಿಯ ದಕ್ಷಿಣ ಭಾರತದ ಕರ್ನಾಟಕದ ಮಧ್ಯಭಾಗದ ಬಯಲುಸೀಮೆಯಲ್ಲಿ ನೆಲೆಗೊಂಡಿರುವ ಇದು, ಜಿಲ್ಲಾಕೇಂದ್ರ ಬಳ್ಳಾರಿಯಿಂದ ೮೦ ಕಿ.ಮೀ. ದೂರದಲ್ಲಿದ್ದು, ತಾಲ್ಲೂಕು ಕೇಂದ್ರವಾಗಿದೆ.[೨] ಹೋಬಳಿ ಪರಿಸರವು ೩೦ ಗ್ರಾಮಗಳು ಒಂದು ಬೇಚರಾಕು ಗ್ರಾಮ(ಗುಂಡಿನಹೊಳೆ) ಒಳಗೊಂಡಿದೆ.[೩] ಹಾಗೆ ನನ್ನ ಹೋಬಳಿ ಅಧ್ಯಯನಕ್ಕೆ ಅವಶ್ಯಕ ಎನಿಸುವ ನನ್ನ ತಾಲ್ಲೂಕಿನ ಜಿಲ್ಲೆಯ ಹಾಗೂ ಹೊರ ಜಿಲ್ಲೆಯ ಪ್ರದೇಶ ಮತ್ತು ಪ್ರಮುಖ ಅಂಶಗಳನ್ನು ಅಧ್ಯಯನದ ಅವಶ್ಯಕತೆಗೆ ಅನುಗುಣವಾಗಿ ಪ್ರಾಸಂಗಿಕವಾಗಿ ಬಳಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ದೊಡ್ಡ ಕೆರೆಗಳು ಮತ್ತು ಕೆಲವು ಮಧ್ಯಮಗಾತ್ರದ ಕೆರೆಗಳಲ್ಲದೆ ಅಲ್ಲಲ್ಲಿ ಕೆರೆಯಂತೆ ಹೋಲುವ ಕಟ್ಟೆಗಳು, ಗೋಕಟ್ಟೆ ಮತ್ತು ಚೆಕ್‌ಡ್ಯಾಂ ಕಂಡುಬರುತ್ತವೆ. ಬಳ್ಳಾರಿ ಜಿಲ್ಲೆಯ ದೊಡ್ಡ ದೊಡ್ಡ ಬೆಟ್ಟಗಳಿರುವ ಸಂಡೂರು, ಹರಪನಹಳ್ಳಿ, ಗುಡೇಕೋಟೆ, ಹೊಸಪೇಟೆ, ಕಂಪ್ಲಿ, ದರೋಜಿ, ಕುರುಗೋಡು ಮತ್ತು ಬಳ್ಳಾರಿಗಳಲ್ಲಿ ಇರುವಂತೆ ಕೂಡ್ಲಿಗಿ ಹೋಬಳಿಯಲ್ಲಿ ದೊಡ್ಡ ಬೆಟ್ಟಗಳಿವೆ.[೪] ಕೂಡ್ಲಿಗಿ ಬೆಟ್ಟಗಳಲ್ಲಿ ಎರಡು ಸಾಲುಗಳಿವೆ. ಕೂಡ್ಲಿಗಿ ಬೆಟ್ಟಸಾಲು ಆನೆಕಲ್ಲುಗುಡ್ಡ(೭೮೦ ಮೀ) ಉತ್ತರದಲ್ಲಿ ೫ ಕಿ.ಮೀ. ದೂರದಲ್ಲಿ ಪ್ರಾರಂಭವಾಗಿ ಕೂಡ್ಲಿಗಿ ಪಟ್ಟಣದ ಉತ್ತರ ಮತ್ತು ಪೂರ್ವದಲ್ಲಿ ಹಬ್ಬಿ ಜರಿಮಲಿದುರ್ಗದ(೮೯೦ ಮೀ.) ಆಗ್ನೇಯಲ್ಲಿ ಕೊನೆಗೊಳ್ಳುತ್ತದೆ. ಗುಡೇಕೋಟೆ ಶ್ರೇಣಿ ಸಂಡೂರು ತಾಲ್ಲೂಕಿನ ಚೋರನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ದಿಕ್ಕಿಗೆ ಹಬ್ಬಿ ಗುಡೇಕೋಟೆ ಉತ್ತರ ಭಾಗದಲ್ಲಿ ಮುಂದುವರಿದು ಚಿನ್ನಹಗರಿ ಕಣಿವೆಯನ್ನು ದಾಟುತ್ತದೆ.[೫]

## ಭೂರಚನೆ

ಕೂಡ್ಲಿಗಿ ಹೋಬಳಿ ಪರಿಸರವು ಬೆಟ್ಟ-ಗುಡ್ಡ ಅರಣ್ಯ ಹೊಂದಿದ ಪ್ರದೇಶವಾಗಿದ್ದು, ಸಮುದ್ರ ಮಟ್ಟದಿಂದ ೫೯೬ ಮೀಟರ್ ಎತ್ತರದಲ್ಲಿದೆ. ಈ ಪ್ರದೇಶದ ಗಾಳಿಯ ವೇಗ ಗಂಟೆಗೆ ೨೩ Kph(ಕಿಲೋಮೀಟರ್ ಫಾರ್ ಹವರ್) ಇಲ್ಲಿನ ಸರಿಯಾದ ತಾಪಮಾನ ೨೯ ಆಗಿದ್ದು, ೧೪.೫೪°, ೭೬.೨೩°, ಉತ್ತರ ಅಕ್ಷಾಂಶ ೧೪.೯°, ೭೬.೩೮°, ಪೂರ್ವ ರೇಖಾಂಶದ ವೇಳೆಗೆ ಈ ಪರಿಸರ ಪ್ರದೇಶ ವ್ಯಾಪಿಸಿದೆ. ಒಮ್ಮೊಮ್ಮೆ ೪೫° ಉಷ್ಣಾಂಶ ಕಂಡುಬರುತ್ತದೆ. ಪ್ರಾಕೃತಿಕವಾಗಿ ಇಲ್ಲಿನ ನೆಲ ಎರೆಮಣ್ಣು, ಕಲ್ಲುಮರಳು ಮಿಶ್ರಿತ ಕೆಂಪು ಮತ್ತು ಕಂದು ಮಸಾರಿಯ ಮಣ್ಣು ಕಾಣಸಿಗುತ್ತದೆ. ಕೂಡ್ಲಿಗಿ ತಾಲ್ಲೂಕಿನ ಒಟ್ಟು ವಿಸ್ತೀರ್ಣ ೧.೫೯.೭೦೬[೬] ಹೆಕ್ಟೇರ್.

ತಾಲ್ಲೂಕು ನಾಲ್ಕು ಹೋಬಳಿ ಹೊಂದಿದ್ದು, ಕೂಡ್ಲಿಗಿ, ಕೊಟ್ಟೂರು, ಖಾನಾಹೊಸಹಳ್ಳಿ ಮತ್ತು ಗುಡೇಕೋಟೆ(ಫಿರ್ಕಾ)ಗಳಾಗಿ ವಿಭಾಗಿಸಲಾಗಿದೆ. ಒಟ್ಟು ತಾಲ್ಲೂಕಿನ ಚದುರ ಕಿ.ಮೀ.ಗಳೆಂದರೆ ೧.೮೨೫ ರಷ್ಟಾಗಿದೆ.[೭]

## ಹವಾಗುಣ

ಕೂಡ್ಲಿಗಿ ತಾಲ್ಲೂಕು ಮತ್ತು ಹೋಬಳಿ ಪರಿಸರವು ಬಹುತೇಕ ಒಂದೇ ರೀತಿಯ ಹವಾಗುಣ ಹೊಂದಿದ್ದು, ಹೆಚ್ಚಾಗಿ ಶುಷ್ಕ ವಾಯುಗುಣವಿದೆ. ಇದು ಮಳೆಯಾಶ್ರಿತ ಭೂಮಿಯಾಗಿದ್ದು, ಮಾನ್‌ಸೂನ್ ಮಾರುತಗಳೇ ಈ ಪ್ರದೇಶದ ಜೀವಾಳ. ಮುಂಗಾರು ಹಾಗೂ ಹಿಂಗಾರು ಮಳೆ ಸೆರಗಿನ ಪ್ರದೇಶವಾಗಿದೆ. ಇಲ್ಲಿ ಹೆಚ್ಚು ಮಳೆಬೀಳದ ಪರಿಣಾಮ ದಟ್ಟವಾದ ಅರಣ್ಯ ಕಂಡುಬರುವುದಿಲ್ಲ. ಆದರೆ ಬಳ್ಳಾರಿ ಜಿಲ್ಲೆಯಲ್ಲಿಯೇ ಹೆಚ್ಚು ಕಾಯ್ದಿಟ್ಟ ಅರಣ್ಯ ಹೊಂದಿರುವ ತಾಲ್ಲೂಕು ಇದಾಗಿದೆ. ಬೇಸಿಗೆಯಲ್ಲಿ ಅತಿ ಬಿಸಿಲು, ಚಳಿಗಾಲದಲ್ಲಿ ಅತಿ ಚಳಿ ಕಂಡುಬರುತ್ತದೆ. ಇಲ್ಲಿನ ಸರಾಸರಿ ಮಳೆಯ ಪ್ರಮಾಣ ೭೩೯೦ ಮಿ.ಮೀ. ರಷ್ಟಿದೆ.[೮] ತಾಲ್ಲೂಕಿನಲ್ಲಿ ೧೦ ದೊಡ್ಡ ಕೆರೆಗಳೂ ಸೇರಿದಂತೆ ಒಟ್ಟು ೭೩ ಕೆರೆಗಳಿವೆ. ಕೂಡ್ಲಿಗಿ ಹೊರಹೊಲಯದಲ್ಲಿ ಸು. ೧.೭೧ ಎಕರೆ ವಿಸ್ತಾರವಾಗಿ ಹಬ್ಬಿರುವ ದೊಡ್ಡ ಆಲದ ಮರವಿದೆ.

## ಜನಸಂಖ್ಯೆ

ಭೌಗೋಳಿಕ ವಿಶೇಷತೆ ಹೊಂದಿರುವ ಬಳ್ಳಾರಿ ಜಿಲ್ಲೆಯ ಕೆಲವೇ ತಾಲ್ಲೂಕುಗಳಲ್ಲಿ ಕೂಡ್ಲಿಗಿ ತಾಲ್ಲೂಕು ಒಂದು. ಭೌಗೋಳಿಕತೆಯ ಅನುಗುಣವಾಗಿ ಪರಿಸರಕ್ಕೆ ಹೊಂದಿಕೊಂಡಂತೆ ಜನಸಂಖ್ಯೆ ಕಂಡುಬರುತ್ತದೆ. ಕೂಡ್ಲಿಗಿ ತಾಲ್ಲೂಕಿನ ಒಟ್ಟು ಜನಸಂಖ್ಯೆ ೩,೦೮,೯೦೧ ಇದೆ. ಕೂಡ್ಲಿಗಿ ಹೋಬಳಿಯಲ್ಲಿ ೬೧.೪೨೪ರಷ್ಟು ಜನಸಂಖ್ಯೆ ಕಂಡುಬರುತ್ತದೆ. ತಾಲ್ಲೂಕಿನ ಒಟ್ಟು ಗ್ರಾಮಗಳು ೨೨೧, ಅದರಲ್ಲಿ ೩೪ ಗ್ರಾಮಪಂಚಾಯಿತಿ ಒಳಗೊಂಡಿದೆ, ಮುಖ್ಯ ಕಂದಾಯ ಗ್ರಾಮಗಳು ೮೯. ಹೋಬಳಿಯ ಒಟ್ಟು ಗಂಡು ೩೧.೨೨೫, ಒಟ್ಟು ಹೆಣ್ಣು ೩೦.೧೩೯, ಪಟ್ಟಣದಲ್ಲಿ ವಾಸಿಸುವ ಜನಸಂಖ್ಯೆ ೨೬.೬೮೦, ಗ್ರಾಮಗಳಲ್ಲಿ ೩೪.೭೪೪, ಜನವಸತಿ ಕಂಡುಬರುತ್ತದೆ. ಕೂಡ್ಲಿಗಿ ಹೋಬಳಿ ಪ್ರದೇಶ ಒಂದು ಪಟ್ಟಣ ಪಂಚಾಯಿತಿ, ಇದು ನಾಲ್ಕು ಗ್ರಾಮಪಂಚಾಯಿತಿ ಒಳಗೊಂಡಿದೆ. ಶಿವಪುರ, ಬಡೇಲಡಕು, ಮೊರಬ, ಕಕ್ಕುಪ್ಪಿ. ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಭಾಷೆಗಳು ಕನ್ನಡ, ಹಿಂದಿ, ತೆಲುಗು, ಇಂಗ್ಲಿಷ್ ಮತ್ತು ದಖ್ಖನ್ ಭಾಷೆ ಆಡುತ್ತಾರೆ.[೯]

## ಸಸ್ಯಸಂಪತ್ತು ಮತ್ತು ಪ್ರಾಣಿವರ್ಗ

ಇಲ್ಲಿನ ಪರಿಸರವು ಬೆಟ್ಟ-ಗುಡ್ಡ ಅರಣ್ಯ ಪ್ರದೇಶ ಹೊಂದಿರುವ ನೆಲೆಯಾಗಿದೆ. ಇದು ಮುಂಗಾರು ಹಾಗೂ ಹಿಂಗಾರು ಅವಲಂಬಿಸಿರುವ ಮಳೆ ಆಶ್ರಯ ಭೂಮಿ. ಇಲ್ಲಿ ಅಲ್ಬೇಜಿಯ, ಅಕೇಶಿಯ, ಅರಾಬಿಕ್, ಯುಪೋರ್, ಬಿಯಾಸ್ ಜಾತಿಗಳಿಗೆ ಸೇರಿದ ಕುರುಚಲು ಮರಗಿಡಗಳು ಹೆಚ್ಚಾಗಿ ಬೆಳೆಯುತ್ತವೆ. ಇಂತಹ ಮರಗಿಡಗಳ ಹಾಗೆ ತಾಲ್ಲೂಕಿನ ಅರಣ್ಯವನ್ನು ದಕ್ಷಿಣಾರ್ಧದ ಉಷ್ಣವಲಯದ ಕುರುಚಲು ಕಾಡು ಎಂದು ಗುರುತಿಸಲ್ಪಟ್ಟಿದೆ. ಕೂಡ್ಲಿಗಿ ತಾಲ್ಲೂಕು ಮತ್ತು ಹೋಬಳಿಯಲ್ಲಿ ಎಲೆ ಉದುರುವ ಕಾಡು ಕಂಡುಬರುತ್ತವೆ. ಹೋಬಳಿ ಪರಿಸರದಲ್ಲಿ ಗುಡ್ಡಗಳು, ವಿವಿಧ ಜಾತಿಯ ಮರಗಳು, ಅನೇಕ ಪ್ರಭೇದದ ಹೂ, ಸಸ್ಯಗಳು ಕಾಣುವುದಲ್ಲದೆ ದಿಂಡು, ಹುಣಸೆ, ಬೇವು, ಶ್ರೀಗಂಧ, ಜಾಲಿ, ಬಿಳಿಜಾಲಿ, ಬಾಗೆ, ತೆರೇದ, ತಂಡರಿಸೆ, ತೇಗ, ಕತ್ತಾಳೆ, ಬಬ್ಬಲಿ, ಮತ್ತಿ, ಹುರುಗಲು, ಅಳಲೆ, ಬೇಲ, ಬಿಲ್ವಾರ, ಈಚಲು, ಪಾಪಾಸುಕಳ್ಳಿ, ಚಂಡರಿಕೆ ಮುಂತಾದ ಮರ-ಗಿಡಗಳು ಅರಣ್ಯ ಭಾಗಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.[೧೦] ತಾಳೆಮರದ ದಿಂಡು ಮನೆಯ ಛಾವಣಿಗೆ ಉಪಯೋಗಿಸಲಾಗುವುದು. ಈಚಲು ಗಿಡದಿಂದ ಮನೆಬಳಕೆಯ ವಸ್ತುಸಾಮಗ್ರಿ ತಯಾರಿಕೆಯಾಗುತ್ತವೆ. ಈಚಲು ಬೆಳೆಯುವ ಒಂದು ಗ್ರಾಮವೇ ಇಲ್ಲಿದೆ. ಅದು ಕೂಡ್ಲಿಗಿ ಮತ್ತು ಕೊಟ್ಟೂರು ರಸ್ತೆಯಲ್ಲಿ ಬರುವ ಈಚಲಬೊಮ್ಮನಹಳ್ಳಿ.

### ಜಲಸಂಪತ್ತು

ಕೂಡ್ಲಿಗಿ ತಾಲ್ಲೂಕಿನಲ್ಲಿ ತುಂಗಾಭದ್ರದಂತ ದೊಡ್ಡ ನದಿಗಳಿಲ್ಲ, ಚಿನ್ನಹಗರಿ, ದೊಡ್ಡಹಗರಿ, ದೊಡ್ಡಳ್ಳ, ಕಲ್ಲುಹಳ್ಳ, ಹಿರೇಹಳ್ಳ, ಉಜ್ಜಿನಿಹಳ್ಳ, ವರತಿಹಳ್ಳಗಳು ಪ್ರಸ್ತುತ ಪ್ರದೇಶದಲ್ಲಿ ಕೆರೆಗಳಿಗೆ ನೀರಿನಾಸರೆಗಳಾಗಿವೆ. ಆಯಾ ಗ್ರಾಮದ ಪಕ್ಕದಲ್ಲಿ ಹರಿಯುವುದರಿಂದ ಆ ಗ್ರಾಮದೇವರ ಹೆಸರಿನಿಂದ, ವ್ಯಕ್ತಿ ಹೆಸರಿನಿಂದ ಗ್ರಾಮದ ಹೆಸರಿನಿಂದ ಗುರುತಿಸಲ್ಪಡುತ್ತವೆ. ಈ ಹಳ್ಳಗಳು ಕೃಷಿಗೆ ನೀರನ್ನು ಒದಗಿಸುವುದು ಮಾತ್ರವಲ್ಲದೆ ಪ್ರಾಚೀನ ಮಾನವನ ವಸತಿ ತಾಣವಾಗಿವೆ. ಉದಾಹರಣೆಗೆ: ಕಕ್ಕುಪ್ಪಿಹಳ್ಳ ಹೆಚ್ಚು ಅರಣ್ಯಭಾಗ ಹೊಂದಿದೆ. ಇವು ಕೆರೆಗಳಿಗೆ ನೀರುಣಿಸಿ ಮಾನವನ ಬದುಕಿಗೆ ನೇರವಾಗಿ ಅಥವಾ ಪರೋಕ್ಷವಾಗಿ ಆಧಾರವಾಗಿವೆ. ಹಳ್ಳಗಳು ಪ್ರತಿ ಎರಡು-ಮೂರು ಕಿ.ಮೀ.ಗೆ. ಒಂದರಂತೆ ಕಂಡುಬರುತ್ತವೆ.

### ಬೆಳೆಗಳು

ಮಳೆ ಬಂದರೆ ಬೆಳೆ ಎಂಬಂತಾಗಿದೆ ಇಲ್ಲಿನ ಸ್ಥಿತಿ, ಜನ ಮಳೆಯನ್ನೇ ಆಶ್ರಯಿಸಿದ್ದಾರೆ. ಕೆಂಪು-ಕಂದು, ಮರಳು ಮಿಶ್ರಣ ಭೂಮಿ ಇರುವುದರಿಂದ ನೆಲಗಡಲೆ, ಜೋಳ, ಮೆಕ್ಕೆಜೋಳ, ಭತ್ತ, ಸೂರ್ಯಕಾಂತಿ, ಶೇಂಗಾ, ತೊಗರಿ, ಸಜ್ಜೆ, ರಾಗಿ, ನವಣೆ, ಉರುಳಿ ಮತ್ತು ಕಬ್ಬು ಬೆಳೆಗಳನ್ನು ಬೆಳೆಯಲಾಗುತ್ತದೆ.[೧೧] ಈ ಪ್ರದೇಶದ ಪ್ರಮುಖ ಆಹಾರ ಧಾನ್ಯ ಜೋಳ, ಆದ್ದರಿಂದ ಇದನ್ನು ಹೆಚ್ಚಾಗಿ ಬೆಳೆಯುತ್ತಾರೆ. ಹಾಗೆ ಔಡಲ, ಹಲಸಂದಿ, ಹೆಸರು, ಮಡಿಕೆ, ಕಾಳುಗಳನ್ನು ಸಹ ಉಳುಮೆಯಿಂದ ತೆಗೆಯುತ್ತಾರೆ.

### ಬೆಟ್ಟಗುಡ್ಡಗಳು

ಜಿಲ್ಲೆಯ ಇತರ ತಾಲ್ಲೂಕಿನಲ್ಲಿ ಕಂಡುಬರುವಂತೆ ಈ ಹೋಬಳಿ ಪರಿಸರದಲ್ಲಿ ಶಿವಪುರ, ಕಕ್ಕುಪ್ಪಿ, ವೀರನದುರ್ಗ, ಅಮ್ಮನಕೆರೆ, ವಿರುಪಾಪುರ, ಮೊರಬ, ಬಸಾಪುರತಾಂಡಗಳಲ್ಲಿ ಊರಿಗೆ ಹೊಂದಿಕೊಂಡಂತೆ ಅನೇಕ ಬೆಟ್ಟಗುಡ್ಡಗಳು ಕಂಡುಬರುತ್ತವೆ. ಅದರಲ್ಲಿ ಕೂಡ್ಲಿಗಿ ಪ್ರದೇಶದ ಹತ್ತಿರದಲ್ಲಿ ಐದು ಪ್ರಮುಖ ಬೆಟ್ಟಗುಡ್ಡ ಕಾಣಸಿಗುತ್ತವೆ. ಸಿದ್ದಯ್ಯನಗುಡ್ಡ, ವೀರನಗುಡ್ಡ, ದುರ್ಗ, ಅಮರದೇವಗುಡ್ಡ, ಓಬಳದಯ್ಯನಗುಡ್ಡ, ಜಂಗಮರಗುಡ್ಡ(ಜಂಗೇಲರಗುಡ್ಡ) ಕೂಡ್ಲಿಗಿಯನ್ನು ಸುತ್ತುವರೆದಿದೆ.

### ಸಿಧ್ಯಯ್ಯನಗುಡ್ಡ

ಸಿದ್ಧಯ್ಯನಗುಡ್ಡ ಎಂದು ಕರೆಯಲ್ಪಡುವ ಇದು ಕೂಡ್ಲಿಗಿಯ ರಾಷ್ಟ್ರೀಯ ಹೆದ್ದಾರಿ ೧೩ರ ಪಕ್ಕದಲ್ಲಿದ್ದು, ಸಿದ್ದಯ್ಯ(ಈಶ್ವರ) ಎಂಬ ಶಿವಲಿಂಗವಿದ್ದು, ಪೂರ್ವದ ಶಿವಲಿಂಗ ಘೋರ್ಪಡೆಯ ಅರಸರು ಸಿದ್ದಯ್ಯನ ಗರ್ಭಗುಡಿ ಹೊಕ್ಕಿದ ಹುಲಿಹೊಡೆಯುವ ಬದಲು ಶಿವಲಿಂಗದ ಬ್ರಹ್ಮಭಾಗ ಭಗ್ನಗೊಳಿಸಿದ ಕಾರಣ ಮತ್ತೊಂದು ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ದೇಗುಲವು ಗರ್ಭಗೃಹ ಅಂತರಾಳ, ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ದೇವಸ್ಥಾನ ಸುತ್ತಲೂ ಪ್ರಾಕಾರಗೋಡೆ ಇದ್ದು, ಮುಂಭಾಗದಲ್ಲಿ ದೀಪಸ್ತಂಭವಿದೆ. ಸಭಾಮಂಟಪದಲ್ಲಿ ನಂದಿಗಳಿವೆ. ಕಂಬಗಳು ಚೌಕಾಕಾರ ಮತ್ತು ಬಹುಮುಖಗಳಲ್ಲಿ ಕೆತ್ತಿದ್ದಾರೆ. ಸಭಾಮಂಟಪದ ಬಾಗಿಲುವಾಡ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಇವು ವಿಜಯನಗರೋತ್ತರ ಎನ್ನಬಹುದು.

**ಬೀರಲಗುಡ್ಡ**

ಕೂಡ್ಲಿಗಿಯಿಂದ ೬ ಕಿ.ಮೀ. ದಕ್ಷಿಣಕ್ಕಿದೆ, ಇದನ್ನು ವೀರನದುರ್ಗ ಎಂತಲೂ ಕರೆಯುವರು. ಬಳ್ಳಾರಿ ಜಿಲ್ಲೆಯ ಪಾಳೆಗಾರರ ಪಾಳೆಪಟ್ಟುಗಳಲ್ಲಿ ಇದು ಅತ್ಯಂತ ಬಲಿಷ್ಠಕೋಟೆ ಹೊಂದಿದೆ. ಈ ಬೆಟ್ಟ ಪ್ರದೇಶ ಕೂಡ್ಲಿಗಿ ತಾಲ್ಲೂಕಿನಲ್ಲಿ ಮುಕ್ಕಾಲು ಭಾಗದ ಕೋಟೆ ಅವಶೇಷ ಹೊಂದಿದ ಏಕೈಕ ಗುಡ್ಡವಿದು. ಹರಪನಹಳ್ಳಿ ಜರಿಮಲೆ, ಚಿತ್ರದುರ್ಗದ ಪಾಳೆಗಾರರು ಮತ್ತು ಟಿಪ್ಪುವಿನ ಆಳ್ವಿಕೆಯ ಕಾಲದಲ್ಲಿ ಮೆರೆದ ಗುಡ್ಡವಿದ್ದು, ಈ ಗುಡ್ಡದ ಮೇಲೆ ಮಲಿಯಮ್ಮ ಗುಡಿ, ಉಗ್ರಾಣ ಮತ್ತು ವಾಸದ ನೆಲೆಗಳು ಮುಂತಾದವು ನಿರ್ಮಾಣಗೊಂಡಿವೆ.

**ಅಮರದೇವಗುಡ್ಡ**

ಈ ಪ್ರದೇಶ ಈಗ ಕೂಡ್ಲಿಗಿ ನಗರದ ೧ನೇ ವಾರ್ಡ್ ಆಗಿ ಪರಿವರ್ತನೆಗೊಂಡಿದೆ. ಊರಿನ ಪಕ್ಕದ ಗುಡ್ಡವೇ ಅಮರದೇವರ ಗುಡ್ಡ. ಗುಡ್ಡದ ಮೇಲೆ ಅಮರೇಶ್ವರ ಎಂಬ ಶಿವಲಿಂಗವಿದೆ. ಈ ದೇವಾಲಯವು ಮುಖ್ಯವಾಗಿ ಗರ್ಭಗೃಹ ಅಂತರಾಳಗಳನ್ನು ಹೊಂದಿದೆ. ಇಲ್ಲಿನ ಗುಡ್ಡದ ಮೇಲೆ ಬೃಹತ್‌ಗಾತ್ರದ ಕಡಿದಾದ ಬಂಡೆಗಳಿವೆ. ಹಾಗೆ ಮರಾವಳಿ ಕೂಡ ಅಲ್ಲಲ್ಲಿ ಕಂಡುಬರುತ್ತದೆ. ಗುಡ್ಡದ ಮೇಲೆ ಕೋಟೆ ನಿರ್ಮಾಣವಾಗಿದೆ. ಕೂಡ್ಲಿಗಿ ಹೋಬಳಿಯ ಎರಡನೇ ಅತಿ ಬಲಿಷ್ಠ ದುರ್ಗ ಈ ಗುಡ್ಡದ ಮೇಲಿನದ್ದು. ಇಲ್ಲಿನ ಕೋಟೆ ಯಾರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುದು ಸ್ಪಷ್ಟ ಆಧಾರಗಳಿಲ್ಲ. ಗುಡ್ಡದ ಮೇಲೆ ವಸತಿನೆಲೆಯಿದ್ದು, ಗುಡ್ಡದ ಮೇಲಿನ ಹೊಂಡ ಹಂಪಿಯೊಂದಿಗೆ ಸಂಪರ್ಕದ ಸಂಬಂಧವಿದೆ ಎಂಬ ಸ್ಥಳೀಯರ ತಳಬುಡವಿಲ್ಲದ ನಂಬಿಕೆ ಕಂಡುಬರುತ್ತದೆ. ಗುಡ್ಡದ ಅಡಿಯಿಂದ ಮೇಲಿನವರೆಗೆ ಮೆಟ್ಟಿಲುಗಳಿದ್ದು, ಇತ್ತೀಚೆಗೆ ನವೀಕರಣಗೊಳಿಸಲಾಗಿದೆ.

**ಓಬಳದಯ್ಯನಗುಡ್ಡ**

ಕೂಡ್ಲಿಗಿ ಬಂಡೆಬಸಾಪುರ ತಾಂಡಕ್ಕೆ ಹೊಂದಿದಂತೆ ಇರುವ ಅತ್ಯಂತ ದೊಡ್ಡಬಂಡೆ ಬೆಟ್ಟವಿದು. ಬೆಟ್ಟದ ಮಧ್ಯಭಾಗದಲ್ಲಿ ಓಬಳದಯ್ಯ(ನರಸಿಂಹಸ್ವಾಮಿ ಜೊತೆ ಆಂಜನೇಯ ಬಂಡೆಶಿಲ್ಪವಿದೆ. ಬೆಟ್ಟದಲ್ಲಿ ಗವಿಗಳಿದ್ದು ಕಿರಿದಾದ ಬಂಡೆಸಂದುಗಳು ಗವಿ ಪ್ರವೇಶಕ್ಕೆ ದಾರಿಯಾಗಿ ತೋರುತ್ತವೆ. ಈ ಗವಿಗಳಲ್ಲಿ ಕಾಡುಪ್ರಾಣಿಗಳು ವಾಸವಿರುವುದರಿಂದ ಜನರು ಹೋಗಲು ಭಯಪಡುತ್ತಾರೆ. ಈ ಹಿಂದೆ ಆದಿಮಾನವರ ವಾಸದ ನೆಲೆಯಂತೆ ಕಂಡುಬರುವ ಇಲ್ಲಿನ ಗುಹೆಗಳು ಪ್ರಶ್ನಾರ್ಥಕವಾಗಿ ಉಳಿದಿವೆ. ಈ ಗುಡ್ಡದ ಬಗ್ಗೆ ಸ್ಥಳೀಯರಲ್ಲಿ ಅನೇಕ ಐತಿಹ್ಯ ಪುರಾಣಗಳು ಹುಟ್ಟಿಕೊಂಡಿವೆ. ಆಂಜನೇಯ ಜಿಗಿಯುವಾಗ ಅವನ ಗೆಜ್ಜೆಪಟ್ಟಿ ಹರಿದುಬಿದ್ದು ಅದರ ಸಾಲು ಇಲ್ಲಿದೆ ಎಂಬುದು ಕೆಲವರು ಹೇಳುತ್ತಾರೆ. ಶ್ರಾವಣಮಾಸ, ಕಾರ್ತಿಕಮಾಸದಲ್ಲಿ ಇಲ್ಲಿ ಪರ್ವ ಮತ್ತು ದೀಪೋತ್ಸವಗಳು ನಡೆಯುತ್ತವೆ. ಒಕ್ಕಲು ಮನೆತನದವರು ಮುದ್ರಾದೀಕ್ಷಾಕಾರ್ಯಗಳ ಆಚರಣೆ ಇಲ್ಲಿ ನಡೆಸುತ್ತಾರೆ.

**ಜಂಗಮರಗುಡ್ಡ**

ಈಗ ಕೂಡ್ಲಿಗಿಯ ಭಾಗವಾಗಿರುವ ಇದು ಬಿ.ಬಿ. ತಾಂಡಕ್ಕೆ ಹೋಗುವಾಗ ಬರುವ ಮೊದಲ ಗುಡ್ಡವಿದು, ಈ ಗುಡ್ಡದಲ್ಲಿ ಸಾದು-ಸಂತರು, ಜಂಗಮರು ಹತ್ತಿರವಿರುವ ಓಬಳದಯ್ಯನಗುಡ್ಡ ಮತ್ತು ಶಿವಪುರ, ಕೈವಲ್ಯಪುರಕ್ಕೆ ಸಮೀಪವಿರುವ ಅಯ್ಯನಗುಡ್ಡಕ್ಕೆ ಹೋಗಿಬರುವ ಪದ್ಧತಿ ಇತ್ತೆಂದು ಜನರು ಬಲವಾಗಿ ನಂಬಿರುವುದರಿಂದ ಕೆಲವು ವಿಶೇಷ ದಿನಗಳಲ್ಲಿ ಗಂಟೆಶಬ್ದ, ಮಂತ್ರ ಉಚ್ಚಾರಣೆ ಶಬ್ದ ಬರುತ್ತವೆ ಎಂದು ಬಲ್ಲವರು ಹೇಳುವುದುಂಟು,

ಹಾಗೆ ಶಿವಪುರ ಗುಡ್ಡದ ನೆಲಗವಿ ನೋಡಿದರೆ ಇಂತಹ ಅನುಮಾನ ಕಾಡದೇ ಇರುವುದಿಲ್ಲ. ಒಟ್ಟಾರೆಯಾಗಿ ಈ ಭಾಗದಲ್ಲಿ ಜನರು ಸುಳಿದಾಡಲು ಹೆದರುತ್ತಾರೆ. ಜಂಗಮ ಗುಡ್ಡದ ಪೂರ್ವ, ಪಶ್ಚಿಮ, ದಕ್ಷಿಣಭಾಗ ಸಾಕಷ್ಟು ವಿಶಾಲವಾಗಿದ್ದು(ಈಗ ಹೊಲಗಳಾಗಿ ಪರಿವರ್ತನೆಯಾಗಿವೆ), ಮೊದಲು ಈ ಭಾಗ ಅರಣ್ಯಪ್ರದೇಶವಾಗಿತ್ತೆಂದು ನಂತರ ಯುದ್ಧಭೂಮಿಯಾಗಿ ರೂಪುಗೊಂಡು ರಣರಂಗವಾಗಿತ್ತೆಂದು ಹಿರಿಯ ಪ್ರಜಾವಾಣಿ ಪತ್ರಕರ್ತ ಮಲ್ಲಣ್ಣ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಅದಕ್ಕೆ ಸಾಕ್ಷಿಯಂತೆ ಈ ಪ್ರದೇಶದಲ್ಲಿ ೨ ವೀರಗಲ್ಲು ಇಲ್ಲಿ ಇಂದಿಗೂ ಕಂಡುಬರುವುದು ಇದಕ್ಕೆ ಪುಷ್ಠಿ ನೀಡುವಂತಿವೆ.

**ಕೂಡ್ಲಿಗಿ ಪದ ನಿಷ್ಪತ್ತಿ**

ಪ್ರತಿಯೊಂದು ಊರಿಗೆ ಒಂದಲ್ಲ ಒಂದು ರೀತಿಯ ವಿಶೇಷಗಳಿರುತ್ತವೆ. ಊರಿನ ಹೆಸರು ಸಸ್ಯವಾಚಿಯಾಗಿ, ಪ್ರಾಣಿವಾಚಿಯಾಗಿ, ವ್ಯಕ್ತಿವಾಚಿಯಾಗಿ ರೂಢಿಯಲ್ಲಿ ಬಂದಿರುವುದು ಕಾಣುತ್ತೇವೆ. 'ಕೂಡಲಗಿ' ಎಂಬ ಪದನಾಮವೇ ಕೂಡಿಸು, ಬಂದುಸೇರು, ಒಕ್ಕೂಟವಾಗು ಎಂಬ ಅರ್ಥ ಮೇಲ್ನೋಟಕ್ಕೆ ಕಂಡುಬರುತ್ತದೆ. ಇದರ ಪದ ನಿಷ್ಪತ್ತಿ ನೋಡುವುದಾದರೆ–[೧೨]

ಕೂಡ[೧೩]– ಒಡನೆ, ಸಂಗಡ, ಜೊತೆಯಲ್ಲಿ ಎಂಬ ಅರ್ಥದಲ್ಲಿಯೂ

ಕೂಡಲ್[೧೪]– ಕೂಡಲು(ನಾ) ಕೂಡಿಕೊಳ್ಳುವಿಕೆ ಎಂತಲೂ, ಜೊತೆ, ಸಂಗಮದ ಅರ್ಥ ಬರುವಂತೆಯೂ ಸಂಭೇದ, ಸಂಗಮ, ಸಂಭೇಧ್ಯಂ ಎಂಬ ಪದ ಉಚ್ಚಾರಣೆಯಲ್ಲಿಯೂ ಗುರುತಿಸಲಾಗುತ್ತದೆ.

ಕೂಡಲು[೧೫]– ಎಂಬುದು ನೋಡುವುದಾದರೆ ಹಲವು ರೀತಿ ಕೂಡುವುದು– ನದಿ, ರಸ್ತೆ, ಹೃದಯಾಳು, ದಿಕ್ಕುಗಳು, ಗುಣಗಳು, ಕೂಡುವುದು ಎಂಬ ಅರ್ಥ ನೀಡುತ್ತವೆ.

ಕೂಡಲಿ[೧೬]– ಎನ್ನುವ ಪದ ಒಬ್ಬಾತನ ಹೆಸರು, ಕೂಡಲಿಯ ಬೇಡ ಎಂಬರ್ಥವಿದೆ. ಒಂದು ಊರಿನ ಹೆಸರಿನಿಂದ ನೋಡಲಾಗುತ್ತದೆ.

ಕೂಡಿಗಿ[೧೭]–(ನಾ) ಎಂಬ ಪದ ಕೂಡಿಸುವಿಕೆ, ಶೇಖರಣೆ ಎಂಬೆಲ್ಲ ಅರ್ಥ ಹೊಂದಿದೆ.

ಒಟ್ಟಾರೆಯಾಗಿ ಕೂಡ, ಕೂಡಲ್, ಕೂಡಲು, ಕೂಡಲಿ, ಕೂಡಿಗೆ ಈ ಎಲ್ಲಾ ಪದಗಳ ಅರ್ಥ ನೋಡಿದಾಗ ಬಂದು ಸೇರುವ ಸ್ಥಳ ಎಲ್ಲರೂ ಕೂಡಲಾಗಿ ಕೂಡಲಗಿ ಆಗಿ ಈಗ ಕೂಡ್ಲಿಗಿ ಎಂದು ಕರೆಯಲ್ಪಡುತ್ತದೆ. ಮತ್ತೊಂದು ವಿಷಯ ಗಮನಿಸುವುದಾದರೆ–

ಕುರುವ(ಜಲಸಂಧಿ) ಪದಕ್ಕೆ ಉದಾಹರಣೆ ನೋಡುವುದಾದರೆ ಕುದುರು, ಕೂಡಲ್, ನೀರಿನ ಹರಿವುಗಳು ಕೂಡವ ಸ್ಥಳ, ಜಂಗಮ, ಕೂಡ್+ಅಲ್=ಕೂಡಲ್

ಇತರೆ ರೂಪಗಳಲ್ಲಿ– ಕೂಡ್ಲು, ಕೂಡ್ಲಿ, ಕೂಡ್ಲವಾಗಿ ಕೂಡ್ಲೂರು– ಕೂಡ್ಲಿಗಿಯಾಗಿರಬಹುದಾದ ಸಾಧ್ಯತೆಗಳು ಇರಬಹುದು ಎನ್ನುತ್ತಾರೆ ಭಾಷಾ ಪಂಡಿತರು.

ಕೂಡ್ಲಿಗಿ ಈ ಅಧ್ಯಯನದ ಮುಖ್ಯ ವಿಷಯವಸ್ತು ಮತ್ತು ಕೇಂದ್ರಸ್ಥಳ, ಈ ಸ್ಥಳದ ಬಗ್ಗೆ ಸ್ಥಳನಾಮ, ಐತಿಹ್ಯ, ಪುರಾಣ ಅಂಶಗಳು ಹಿಂದಿನಿಂದಲೂ ಇಂದಿನವರೆಗೆ ಒಂದೊಂದು ಅಂಶಗಳನ್ನು ನೀಡುತ್ತವೆ.

ರಾಮಾಯಣ ಕಾಲದಲ್ಲಿ ವಾನರ ಸೇನೆಯು ಹಂಪಿಯ ಬೆಟ್ಟಗಳಲ್ಲಿ ವಾಸಿಸುತ್ತಿದ್ದರು. ಶ್ರೀರಾಮನ ಸಹಾಯಕ್ಕಾಗಿ ದಕ್ಷಿಣ ಲಂಕೆಯ ಕಡೆ ಸೀತಾ ಅನ್ವೇಷಣೆಗೆ ಹೋಗುವಾಗ ನಾನಾ ಕಡೆಯಿಂದಲೂ ವಾನರ ಸೇನೆಯು ಇಲ್ಲಿ ಕೂಡುತ್ತಿತ್ತಂತೆ. ಆದ್ದರಿಂದ ಸ್ಥಳಕ್ಕೆ 'ಕೂಡಲಾಗಿ' ಕೂಡಲಿಗಿ ಎಂಬ ಹೆಸರು ಬಂದಿತೆಂದು ಹೇಳಲಾಗುತ್ತದೆ.[೧೮]

ಇನ್ನೊಂದು ಹೇಳಿಕೆಯ ಪ್ರಕಾರ ಪುರಾತನ ಕಾಲದಲ್ಲಿ ಇದೊಂದು ಚಿಕ್ಕ ಮ್ಯಾಸಬೇಡರ ಹಟ್ಟಿಯಾಗಿದ್ದು, ವಿಜಯನಗರ ರಾಜಧಾನಿ ಹಂಪೆಗೆ, ಜರಿಮಲೆ, ಬೀರಲಗುಡ್ಡ, ಗುಡೇಕೋಟೆ, ಹರಪನಹಳ್ಳಿ ಪಾಳೇಗಾರರು, ದುರ್ಗದ ಪಾಳೆಗಾರರು ವಿಜಯನಗರದ ಅರಸರನ್ನು ಭೇಟಿಯಾಗಲು ಹೋಗುವ ಮುನ್ನ ಇಲ್ಲಿ ಸೇರಿ ಗುಪ್ತ ಸಮಾಲೋಚನೆ ನಡೆಸುವ ಸಲುವಾಗಿ ತಾವು ಕೂಡುವ ಸ್ಥಳವು ಅನ್ಯರಿಗೆ ತಿಳಿಯದಿರಲೆಂದು ಸನ್ನಿಯಾಗಿ ಕೂಡಲಿ ಇಲ್ಲಿ ಎಂದು ಕರೆಯುತ್ತಿದ್ದರಂತೆ. ಮುಂದೆ ಕಾಲಕ್ರಮೇಣವಾಗಿ ಕೂಡಲಗಿಯಾಗಿರಬಹುದು.[೧೯]

ಜರಿಮೆಲೆ, ಗುಡೇಕೋಟೆ, ರಾಯದುರ್ಗ, ಮರಾಠರು, ವಿಜಯಪುರದ ಸುಲ್ತಾನರು, ಹರಪನಹಳ್ಳಿ ಪಾಳೇಗಾರರು ಯಾವುದೇ ರಾಜ್ಯಕ್ಕೆ ಹೋದರೂ ಈ ಪ್ರದೇಶವನ್ನು ಸಂಧಿಸಬೇಕಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಕೂಡ್ಲಿಗಿ ಕೂಡುವ ಕೂಟಗಳಿಂದ ಆಗಿರಬಹುದು. ಕೂಡ್ಲಿಗಿ ತಾಲ್ಲೂಕಿನ ಗುಡೇಕೋಟೆ ಹಿಂದೆ 'ಬಾಣಾಸುರ' ಊರಾಗಿತ್ತು.[೨೦]

**ಪ್ರಾಗಿತಿಹಾಸ**

ಕೂಡ್ಲಿಗಿ ಹೋಬಳಿ ಪರಿಸರಕ್ಕೆ ಹೊಂದಿಕೊಂಡಿರುವಂತೆ ವಿವಿಧ ಆದಿಮಾನವನ ನೆಲೆಗಳಿದ್ದು, ಅವುಗಳ ಸಂಕ್ಷಿಪ್ತ ಪರಿಚಯ ಇಲ್ಲಿ ಮಾಡಲಾಗಿದೆ. ಅದರಲ್ಲಿ ಅಪ್ಪಯ್ಯನಹಳ್ಳಿ, ಕಲ್ಲಹಳ್ಳಿ, ಕುಮತಿ, ಗುಡೇಕೋಟೆ, ಜರಿಮಲೆ, ಜುಮ್ಮೋಬನಹಳ್ಳಿ, ತಿಮ್ಮಲಾಪುರ, ಸಿಡೇಗಲ್ಲು, ಹುಲಿಕುಂಟೆ ಪ್ರಮುಖವು ಅದರಲ್ಲಿ ಕಕ್ಕುಪ್ಪಿಕೂಡ ಒಂದು.

**ಅಪ್ಪಯ್ಯನಹಳ್ಳಿ**

ಕೂಡ್ಲಿಗಿಯಿಂದ ೨೯ ಕಿ.ಮೀ. ದೂರದಲ್ಲಿದೆ ಶಿಲಾತಾಮ್ರಯುಗ. ಸಂಸ್ಕೃತಿಗೆ ಸೇರಿದ ವರ್ಣಚಿತ್ರಗಳು ಅಲ್ಲಿನ ಗವಿಗಳಲ್ಲಿ ಕಂಡುಬಂದಿವೆ; ಅಲ್ಲದೆ ಇಲ್ಲಿಯೇ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಗೋರಿ ಮತ್ತು ವರ್ಣಚಿತ್ರಗಳು ಕಂಡುಬಂದಿದ್ದು ಅಂದಿನ ಸಂಸ್ಕೃತಿಯನ್ನು ಅರಿಯಲು ಸಹಕಾರಿಯಾಗಿವೆ.[೨೧]

**ಕಲ್ಲಹಳ್ಳಿ**

ಕೂಡ್ಲಿಗಿ ಪಟ್ಟಣದಿಂದ ೪೮ ಕಿ.ಮೀ. ದೂರವಿರುವ ಈ ಗ್ರಾಮ(ತಿಪ್ಪೇಹಳ್ಳಿಗೆ ಹೋಗುವ ಮಾರ್ಗ ಹಳ್ಳೂರಿನ ಹತ್ತಿರ) ನೂತನ ಶಿಲಾಯುಗ, ತಾಮ್ರಯುಗ, ಬೃಹತ್‌ಶಿಲಾ ಸಂಸ್ಕೃತಿಯ ನೆಲೆಯನ್ನು ಮತ್ತು ಅದೇ ಕಾಲದ ಉಪಕರಣ ಹಾಗೂ ಮಡಿಕೆ ಭಾಗಗಳು ಮತ್ತು ವರ್ಣಚಿತ್ರಗಳನ್ನು ಶೋಧಿಸಲಾಗಿದೆ.[೨೨]

**ಕುಮತಿ**

ಕುಮತಿ ಗ್ರಾಮವು ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿದೆ. ಬಯಲು ಪ್ರದೇಶವಾಗಿದ್ದು, ಸಣ್ಣ ಮಣ್ಣಿನ ಗುಡ್ಡಗಳನ್ನು ಗ್ರಾಮದ ಸುತ್ತ ಕಾಣಬಹುದಾಗಿದೆ. ಇದು ಮಳೆ

ಕೊರತೆಯ ಪ್ರದೇಶವಾಗಿದ್ದು, ಹಾಗೆ ಚಿನ್ನಹಗರಿ ಗ್ರಾಮದ ಪಕ್ಕದಲ್ಲಿ ಹರಿಯುತ್ತದೆ. ೧೯೯೬ರಲ್ಲಿ ಪುರಾತತ್ವ ಇಲಾಖೆ ಬೆಂಗಳೂರು ಶಾಖೆಯವರು ಕೆ.ವಿ. ಪೂಣಚ್ಚ ಇವರು ನೇತೃತ್ವದಲ್ಲಿ ಹಮ್ಮಿಕೊಂಡಿದ್ದು ಗ್ರಾಮಾಂತರ ಸಮೀಕ್ಷಾ ಕಾರ್ಯದ ಸಮಯದಲ್ಲೂ ಈ ನೆಲೆ ಅನ್ವೇಷಿಸಿ ವರದಿ ಮಾಡಿತು. ಇಲ್ಲಿ ಬೃಹತ್ ಶಿಲಾಯುಗದ ಒಂದು ಕಂಡಿಕೋಣೆಯ ಕಲ್ಗೋರಿ. ಭಾರತದಲ್ಲೇ ಅಪರೂಪವಾದ ಏಳು ಮಾನವಾಕಾರದ ಏಕಶಿಲಾ ಸಮುಚ್ಚಾಯಗಳಿವೆ. ಈ ಗ್ರಾಮದ ಕೆರೆದಂಡೆಯ ಉತ್ತರಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿ ಕೆ.ಎಂ. ತಿಪ್ಪೇರುದ್ರಯ್ಯ ಎಂಬುವರ ಹೊಲದಲ್ಲಿ ಈ ಸಮುಚ್ಚಯಗಳಿವೆ. ಇದರಲ್ಲಿ ೭ ಸ್ಮಾರಕ ಶಿಲ್ಪಗಳಿದ್ದು, ಇವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಇದನ್ನು ದಕ್ಷಿಣೋತ್ತರವಾಗಿ ಯೋಜಿಸಲಾಗಿದೆ.[೨೩]

**ಗುಡೇಕೋಟೆ**

ಕೂಡ್ಲಿಗಿ ಕೇಂದ್ರಸ್ಥಾನದಿಂದ ೩೦ ಕಿ.ಮೀ. ದೂರವಿರುವ ಈ ನೆಲೆಯಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿದ ವಿವಿಧ ಸೂಕ್ಷ್ಮ ಶಿಲಾ ಉಪಕರಣಗಳನ್ನು ಮತ್ತು ನವಶಿಲಾಯುಗ ಕಾಲದ ಮಡಿಕೆಚೂರು ಮತ್ತು ವರ್ಣಚಿತ್ರಗಳನ್ನು ಶೋಧಿಸಲಾಗಿದೆ. ಅಲ್ಲದೆ ಇಲ್ಲಿಯ ಬೃಹತ್ ಶಿಲಾಯುಗದ ಮಡಿಕೆ ಮತ್ತು ವಿವಿಧ ಮಾದರಿಯ ಶಿಲಾಗೋರಿಗಳನ್ನು ಪತ್ತೆ ಹಚ್ಚಲಾಗಿದೆ. ಆದ್ದರಿಂದ ಇದು ಸಹ ಆದಿಮಾನವನ ವಾಸಸ್ಥಾನವಿರಬಹುದೆಂದು ಮತ್ತು ಪ್ರಾಗಿತಿಹಾಸ ಸ್ಥಳವೆಂದು ಗುರುತಿಸಬಹುದು.[೨೪]

**ಜರಿಮಲೆ**

ತಾಲ್ಲೂಕು ಕೇಂದ್ರದಿಂದ ೧೪ ಕಿ.ಮೀ. ದೂರದಲ್ಲಿದೆ. ಇದು ಚಾರಿತ್ರಿಕ ಹಿನ್ನೆಲೆಯಿಂದ ಗುರುತಿಸಿಕೊಂಡಿದ್ದು ಇತ್ತೀಚೆಗೆ ಪ್ರಾಗಿತಿಹಾಸ ಕಾಲದ ಕುರುಹು ದೊರಕಿವೆ. ಇಲ್ಲಿನ ಬಾಗೇಶ್ವರ ದೇವಾಲಯದ ಬಳಿ ನವಶಿಲಾಯುಗ ಕಾಲಕ್ಕೆ ಸೇರಿದ ಡೈಕ ಶಿಲೆಯಿಂದ ತಯಾರಿಸಲಾದ ಕೊಡಲಿ ಹಾಗೂ ತ್ರುಟಿತ ಕೊಡಲಿಗಳು ಹಾಗೂ ಬೂದು, ಕಪ್ಪು, ಕೆಂಪುಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಇವುಗಳಲ್ಲಿ ಬಟ್ಟಲಾಕಾರದ ಕಂಟದ ಭಾಗಗಳು ಪ್ರಮುಖವಾಗಿವೆ. ಇಲ್ಲಿ ದೊರೆತಿರುವ ಕೊಡಲಿಯ ಬಾಯಿಭಾಗವನ್ನು ಹರಿತಗೊಳಿಸಿಲ್ಲ, ಅದನ್ನ ಹೆಚ್ಚಿನ ಮಟ್ಟದಲ್ಲಿ ಉಜ್ಜಿ ನುಣುಪುಗೊಳಿಸಿಲ್ಲ. ಆದರೆ ಕೈಬೆರಳುಗಳ ಗುರ್ತುಗಳು ಮೂಡಿವೆ.[೨೫]

**ಜುಮ್ಮೋಬನಹಳ್ಳಿ**

ಕೂಡ್ಲಿಗಿ ಕೇಂದ್ರ ಸ್ಥಳದಿಂದ ೩೭ ಕಿ.ಮೀ. ದೂರವಿರುವ ಈ ನೆಲೆಯಲ್ಲಿ ಆದಿ ಹಳೆಶಿಲಾಯುಗ ಸಂಸ್ಕೃತಿಗೆ ಸೇರಿದ ಅಬ್ಬೇವಿಲಿಯನ್ ತಂತ್ರಗಾರಿಕೆಯಿಂದ ತಯಾರಿಸಿದ ಶಿಲಾಕೊಡಲಿಯನ್ನು ಇಲ್ಲಿ ಶೋಧಿಸಲಾಗಿದೆ. ಇದರಿಂದ ಇದು ಪ್ರಾಗಿತಿಹಾಸ ನೆಲೆಯೆಂದು ಹೇಳಬಹುದಾಗಿದೆ.[೨೬]

**ತಿಮ್ಮಲಾಪುರ**

ತಾಲ್ಲೂಕು ಕೇಂದ್ರದಿಂದ ೩೦ ಕಿ.ಮೀ. ದೂರದಲ್ಲಿದೆ. ಇಲ್ಲಿ ನವಶಿಲಾಯುಗದ ಸಂಸ್ಕೃತಿಗೆ ಸೇರಿದ ಉಜ್ಜಿ ನಯಗೊಳಿಸಿರುವ ಕಲ್ಲಿನ ಕೊಡಲಿ ಮತ್ತು ಇತರೇ ಅವಶೇಷಗಳನ್ನು ವಿದ್ವಾಂಸರು ಗುರ್ತಿಸಿದ್ದು ಅಂದಿನ ಕಾಲಘಟ್ಟದ ಸಂಸ್ಕೃತಿಗೆ ಹಿಡಿದ ಕನ್ನಡಿ ಎನ್ನಬಹುದು.[೨೭]

**ಸಿಡೇಗಲ್ಲು**

ಕೂಡ್ಲಿಗಿ ತಾಲ್ಲೂಕು ಘಟಕದಿಂದ ೩೯ ಕಿ.ಮೀ. ದೂರವಿರುವ ಈ ಊರು ಸೂಕ್ಷ್ಮಶಿಲಾಯುಗ ಸಂಸ್ಕೃತಿಗೆ ಸೇರಿದ ವಿವಿಧ ಸೂಕ್ಷ್ಮ ಶಿಲಾ ಉಪಕರಣಗಳನ್ನು ಮತ್ತು ನವಶಿಲಾಯುಗ ಕಾಲದ ಮಡಿಕೆಚೂರು

ಮತ್ತು ವರ್ಣಚಿತ್ರಗಳನ್ನು ಇಲ್ಲಿ ಶೋಧಿಸಲಾಗಿದೆ. ಇದರಿಂದ ಆದಿಮಾನವ ವಾಸಸ್ಥಾನವಿರಬಹುದೆಂದು ಪ್ರಮುಖ ಪ್ರಾಗಿತಿಹಾಸದ ನೆಲೆ ಎಂದು ಹೇಳಬಹುದು.[೨೮] ನನ್ನ ಕ್ಷೇತ್ರಕಾರ್ಯ ಶೋಧನೆಯಲ್ಲಿ ಕ್ರಿ.ಪೂ. ೧೫೦೦ ಹಿಂದಿನ ಕೈಗೊಡಲಿ, ಬೂದುಬಣ್ಣದ ಮಡಕೆ, ಕಂದುಬಣ್ಣ ಮಡಕೆ, ಹರಿಯುವ ಗುಂಡುಕಲ್ಲು ಹಾಗೂ ಕಿಟ್ಟಾದ ಉಪಕರಣಗಳು ದೊರಕಿದ್ದು, ಆದಿಮಾನವನ ಚಟುವಟಿಕೆಯ ತಾಣವಾಗಿತ್ತು ಎಂಬುದು ಸ್ಪಷ್ಟೀಕರಿಸುತ್ತದೆ.

**ಹುಲಿಕುಂಟೆ**

ಕೂಡ್ಲಿಗಿಯಿಂದ ೩೦ ಕಿ.ಮೀ. ದೂರದಲ್ಲಿರುವ ಈ ಗ್ರಾಮದ ಸುತ್ತಲೂ ಅರಣ್ಯ ಮತ್ತು ಬೆಟ್ಟಗುಡ್ಡಗಳಿವೆ. ಇದರ ಸಮೀಪ ಗುಡೇಕೋಟೆ ಬೆಟ್ಟಸಾಲು ಹಾದುಹೋಗುತ್ತದೆ. ಈ ಬೆಟ್ಟದ ಬಳಿ ಕೆರೆಹಳ್ಳಗಳಿದ್ದು ಇಲ್ಲಿನ ಗವಿಗಳು ಪ್ರಾಚೀನ ಮಾನವ ವಾಸಕ್ಕೆ ಯೋಗ್ಯನೆಲೆ ಎಂಬುದನ್ನು ಸಾಬೀತುಪಡಿಸುತ್ತದೆ. ಬೃಹತ್‌ಶಿಲಾಯುಗದ ಮಾನವಾಕೃತಿಯ ಶಿಲೆಗಳು, ಕಂಡುಬರುವುದು ಇಲ್ಲಿನ ಮತ್ತೊಂದು ವಿಶೇಷ.[೨೯]

**ಕಕ್ಕುಪ್ಪಿ**

ಕೂಡ್ಲಿಗಿ ಕೇಂದ್ರಸ್ಥಾನದಿಂದ ೬ ಕಿ.ಮೀ. ಪೂರ್ವಕ್ಕೆ ಗುಡೇಕೋಟೆಗೆ ಹೋಗುವ ಮಾರ್ಗದಲ್ಲಿ ಬರುವ ಈ ಗ್ರಾಮ ಕೂಡ್ಲಿಗಿ ಹೋಬಳಿಯಲ್ಲೇ ಹೆಚ್ಚು ಅರಣ್ಯ ಹೊಂದಿದ ಭಾಗವಾಗಿದ್ದು ಹಾಗೆ ಗ್ರಾಮದ ಸುತ್ತಮುತ್ತಲೂ ಗುಡ್ಡಗಳಿವೆ. ಅರಣ್ಯದ ಮಧ್ಯದಲ್ಲಿ ಕೆಲವು ಪ್ರಮುಖ ಹಳ್ಳಗಳು ಹರಿದು ಕೂಡ್ಲಿಗಿ ಕೆರೆಗೆ ಜಲಮೂಲವಾಗಿ ಮೂಡಿಬರುವುದರಿಂದ ಆದಿಮಾನವನು ವಾಸಿಸಲು ಸೂಕ್ತ ಪರಿಸರ ಇದಾಗಿದ್ದು, ಇಲ್ಲಿ ಕಿಟ್ಟಗಳು ದೊರಕಿವೆ. ಹೆಚ್. ತಿಪ್ಪೇಸ್ವಾಮಿ ಅವರು ಈಗಾಗಲೇ ಈ ಪ್ರದೇಶದ ಕ್ಷೇತ್ರಕಾರ್ಯ ಕೈಗೊಂಡು, ಇದೊಂದು ಬೃಹತ್ ಶಿಲಾಯುಗದ ನೆಲೆ ಎಂಬುದಾಗಿ ಗುರ್ತಿಸಿದ್ದಾರೆ.

**ಚಾರಿತ್ರಿಕ ಹಿನ್ನೆಲೆ**

ಪ್ರಾಚೀನ ಚರಿತ್ರೆಯಲ್ಲಿ ದಖ್ಖನ್ ಪ್ರಸ್ಥಭೂಮಿ ಭಾಗವನ್ನು 'ಕುಂತಲದೇಶ' ಎಂದು ಕರೆಯುತ್ತಿದ್ದರು. ಕ್ರಿ.ಪೂ. ೪ನೇ ಶತಮಾನದಲ್ಲಿ ಆಳಿದ 'ನಂದರು' ಕುಂತಲ ದೇಶಕ್ಕೂ ಒಡೆಯರಾಗಿದ್ದರು. ಮೌರ್ಯರ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತವನ್ನೊಳಗೊಂಡಂತೆ ಈ ಪ್ರದೇಶ ಅವರ ಅಧೀನದಲ್ಲಿತ್ತು.[೩೦] ಮೌರ್ಯರ ಚಕ್ರವರ್ತಿ ಅಶೋಕ ಕ್ರಿ.ಪೂ. ಸುಮಾರು ೨೭೨–೨೩೨ ರವರೆಗೆ ಆಳ್ವಿಕೆ ಮಾಡುವಾಗ ಇವನ ಶಾಸನಗಳು ನೆರೆಯ ಸೀಮೆಗಳಾದ ಗವಿಮಠ, ಮಸ್ಕಿ, ನಿಟ್ಟೂರು, ಸಿದ್ಧಾಪುರ, ಜಟ್ಟಿಂಗರಾಮೇಶ್ವರ, ಬ್ರಹ್ಮಗಿರಿಗಳಲ್ಲಿ ದೊರಕಿವೆ. ಬ್ರಹ್ಮಗಿರಿ ಶಾಸನದ ಉಲ್ಲೇಖದಂತೆ ಇದು(ಇಸಿಲಾ) ಸಾಮ್ರಾಜ್ಯದ ದಕ್ಷಿಣ ಗಡಿಯಾಗಿದ್ದು, ಇಸಿಲಾವನ್ನು ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಮಹಾಮಾತ್ರರನ್ನು ಅಲ್ಲಿ ನೇಮಿಸಿದ್ದಿರಬಹುದು.[೩೧] ಹಾಗೆ ಮೌರ್ಯ ಸಾಮ್ರಾಟ ಅಶೋಕನ ಆಳ್ವಿಕೆ ಕಾಲದ ಕ್ರಿ.ಪೂ. ೨೫೮ರ ಶಾಸನ ಕೂಡ್ಲಿಗಿ ತಾಲ್ಲೂಕಿನಲ್ಲಿ ದೊರಕಿರುವುದು ಮತ್ತಷ್ಟು ಪುಷ್ಟೀಕರಿಸಿದೆ.[೩೨] ಅಶೋಕನ ಪ್ರತಿನಿಧಿಯಾದ ಮಹಾಮಾತ್ರನು ಈ ಪ್ರಾಂತ್ಯವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ.

ಕೂಡ್ಲಿಗಿ ಹೋಬಳಿ ಪರಿಸರದಲ್ಲಿ ಹಿಂದುಳಿದ ವರ್ಗಗಳೇ ಅಧಿಕವಾಗಿರುವುದನ್ನು ಕಾಣುತ್ತೇವೆ. ಶಿಷ್ಟ ಸಂಸ್ಕೃತಿಯೊಡನೆ ಪರಿಶಿಷ್ಟ ಸಂಸ್ಕೃತಿಯೂ ಎದ್ದುಕಾಣುವಂತೆ ಬೆರೆತುಕೊಂಡಿದೆ. ಇಲ್ಲಿ ಜನರು ಹಿಂದುಳಿದವರಾದರೂ ಅವರ ಆದರ್ಶ ಮೌಲ್ಯಗಳು ಕುಂದುವಂತವಲ್ಲ. ಇಲ್ಲಿ ಒಂದು ಊರಿನ ಅಥವಾ

ಒಂದು ತಾಲ್ಲೂಕಿನ/ಹೋಬಳಿ ಇತಿಹಾಸವೆಂದರೆ ಕೇವಲ ಅದೊಂದಕ್ಕೆ ಸೀಮಿತವಾಗಿರುವುದಿಲ್ಲ. ತನ್ನ ಸುತ್ತಮುತ್ತಲಿನ ಊರುಗಳ ಅಥವಾ ತಾಲ್ಲೂಕುಗಳ ಹಾಗೆಯೇ ಅದಕ್ಕೆ ಸಂಬಂಧಪಟ್ಟ ಜಿಲ್ಲೆಯ ಹಾಗೂ ನೆರೆಹೊರೆಯ ಜಿಲ್ಲೆಗಳ ಇತಿಹಾಸಗಳೊಡನೆ ಸಂಬಂಧ ಹೊಂದಿರುವುದು ಸಹಜ. ಆಧುನಿಕ ಯುಗದಲ್ಲಿ ಈ ಸಂಬಂಧದ ಎಳೆಗಳು ರಾಷ್ಟ್ರ ಅಂತರಾಷ್ಟ್ರಗಳ ಮಟ್ಟದವರೆಗೂ ವ್ಯಾಪಿಸಿರುತ್ತವೆ. ಹೀಗೆ ನಮ್ಮ ಹೋಬಳಿ ಚರಿತ್ರೆಯನ್ನು ಅವಲೋಕಿಸುವಾಗ ನಮ್ಮ ತಾಲ್ಲೂಕು, ಜಿಲ್ಲೆ, ನಾಡು, ದೇಶಗಳ ಭೂಪಟಗಳ ಹಿನ್ನೆಲೆಯಲ್ಲಿಯೇ ಗುರುತಿಸಬೇಕಾಗುತ್ತದೆ.

ಪ್ರಮುಖ ಅಂಶವೆಂದರೆ ನಾವೀಗ ಕೂಡ್ಲಿಗಿ ಹೋಬಳಿ ಎಂದು ಮೇರೆಗಳಲ್ಲಿ ಗುರುತಿಸುವ ಭೂಭಾಗವು ಪ್ರಾಚೀನ ಕಾಲದಿಂದಲೂ ಒಂದೇ ರೀತಿಯಾಗಿ ಇದ್ದಿಲ್ಲ. ಕಾಲಕಾಲಕ್ಕೆ ಬೇರೆ ಬೇರೆ ರಾಜಕೀಯ ತಿಕ್ಕಾಟಗಳಿಗೆ ಒಳಪಟ್ಟು ಬೇರೆ ಬೇರೆ ರೂಪಗಳನ್ನು ತಳೆಯುತ್ತಾ ಬಂದಿದೆ. ಬೇರೆ ಬೇರೆ ಆಳ್ವಿಕೆಗಳಿಗೆ ಒಳಪಡುತ್ತಾ ಬಂದಿದೆ.

**ಶಾತವಾಹನರು**

ಕ್ರಿಸ್ತಪೂರ್ವ ೨೨೦ರಿಂದ ಕ್ರಿಸ್ತಶಕ ೨೩೦ ರವರೆಗೆ ಸುಮಾರು ನಾಲ್ಕುನೂರು ವರ್ಷ ಕುಂತಲ ದೇಶವನ್ನು ಶಾತವಾಹನರು ಆಳಿದರು. ಮ್ಯಾಕದೋಣಿ(ಆದೋನಿ), ಹಿರೇಹಡಗಲಿಗಳಲ್ಲಿ(ಬಳ್ಳಾರಿ) ಆಳ್ವಿಕೆಗೆ ಸಂಬಂಧಿಸಿದಂತೆ ಎರಡು ಶಾಸನ ದೊರಕಿವೆ. ಇವುಗಳಲ್ಲಿ ಶಾತವಾನಿಹಾರ, ಶಾತವಾನಿರಟ್ಟ ಎಂದು ಉಲ್ಲೇಖಗಳಿವೆ. ದೇವಗಿರಿ, ಚೋರನೂರು, ಅಗ್ರಹಾರ, ಕೂಡ್ಲಿಗಿ, ಕುಡತಿನಿ, ಹಾಳುದೇವಲಾಪುರ, ಕೊಟ್ಟೂರು, ಹೆಗ್ಗಡೆಹಾಳ್(ಹೆಗ್ಡಾಳ್), ಶಿವಪುರ, ಹಂಪಿ, ಕುರುಗೋಡು, ಎಮ್ಮಿಗನೂರು, ಕಂಪ್ಲಿ, ಬಳ್ಳಾರಿ, ಸಿದ್ದಾಪುರ, ಬ್ರಹ್ಮಗಿರಿ, ಕೋಗಳಿ ಮುಂತಾದ ಗ್ರಾಮಗಳಲ್ಲಿ ಶಾತವಾಹನರ ಕಾಲದ ಅವಶೇಷಗಳು ಕಂಡುಬರುತ್ತವೆ.[೩೩] ಈ ಅಂಶಗಳನ್ನು ಗಮನಿಸಿದಾಗ ಕೂಡ್ಲಿಗಿ ತಾಲ್ಲೂಕು ಮತ್ತು ಹೋಬಳಿಯ ಊರುಗಳಾದ ಕೂಡ್ಲಿಗಿ, ಕೊಟ್ಟೂರು, ಹೆಡ್ಗಾಳ್, ಶಿವಪುರ, ಹಾಳುದೇವಲಾಪುರ ಅಲ್ಲದೆ ಈ ಹಿಂದೆ ಕೂಡ್ಲಿಗಿ ತಾಲ್ಲೂಕಿಗೆ ಸೇರಿದ್ದ ಚೋರನೂರು, ಅಗ್ರಹಾರ(ಈಗ ಸಂಡೂರು ತಾಲ್ಲೂಕು) ಕೋಗಳಿ(ಹಗರಿಬೊಮ್ಮನಹಳ್ಳಿ ತಾಲ್ಲೂಕು) ಗ್ರಾಮಗಳು. ಹಿಂದೆ ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬಹುದಾದ ಮಾಹಿತಿಯ ಸಾಧ್ಯತೆಯನ್ನು ವ್ಯಕ್ತಪಡಿಸುತ್ತವೆ. ಈ ಗ್ರಾಮಗಳು ಆಯಾ ಕಾಲಕ್ಕೆ, ಆಯಾ ಅರಸ ಕಾಲದಲ್ಲಿ, ಕೆಲವು ಗುರ್ತಿಸಿಕೊಂಡರೆ ಮತ್ತೆ ಕೆಲವು ನಿರ್ಲಕ್ಷಕ್ಕೆ ಒಳಗಾಗಿ ಅಭಿವೃದ್ಧಿಕಾಣದೆ ಕುಗ್ರಾಮಗಳಾಗಿ ಇದ್ದಿರಬಹುದು. ಅವುಗಳ ಗುರ್ತಿಸಲು ಶತಮಾನಗಳೇ ಕಳೆದಿರಬಹುದು. ಈ ಗ್ರಾಮಗಳು ಶಾತವಾಹನರ ಆಡಳಿತವನ್ನು ಅನುಭವಿಸಿರುವುದು ಮೇಲಿನಂಶದಿಂದ ತಿಳಿದುಬರುತ್ತದೆ.

**ಬನವಾಸಿ ಕದಂಬರು**

ಕ್ರಿ.ಶ. ೪–೫ನೇ ಶತಮಾನದಲ್ಲಿ ಪ್ರಸಿದ್ಧಿಗೆ ಬಂದ ಇವರು ಶಾತವಾಹನ ರಾಷ್ಟ್ರದ ಸೇಂದ್ರಕ ವಿಷಯವನ್ನು(ಬಳ್ಳಾರಿ ಜಿಲ್ಲೆಯ ದಕ್ಷಿಣ ಪಶ್ಚಿಮಭಾಗ ಇರಬೇಕು) ಗೆದ್ದು ಉಚ್ಚಂಗಿದುರ್ಗವನ್ನು ತಮ್ಮ ರಾಜ್ಯದ ಪೂರ್ವಭಾಗದ ರಾಜಧಾನಿಯನ್ನಾಗಿ ಮಾಡಿಕೊಂಡರು. ಇವರು ೧೦–೧೨ನೇ ಶತಮಾನಗಳವರೆಗೂ ಕದಂಬರ ಒಂದು ಮನೆತನ ಕೊಟ್ಟೂರು ಕೋಗಳಿನಾಡನ್ನು ಆಳುತ್ತಾ ಬಂದಿತ್ತೆಂಬುದಕ್ಕೆ ಶಾಸನಗಳು ಸಿಕ್ಕಿವೆ. ಸಂಡೂರಿನ ಸ್ವಾಮಿಮಲೆಯ ಕಾರ್ತಿಕೇಯನ ಉಲ್ಲೇಖವು ಮಯೂರವರ್ಮನ ಚಂದ್ರವಳ್ಳಿ ಶಾಸನದಲ್ಲಿ ಕಂಡುಬರುತ್ತದೆ.[೩೪]

## ಬಾದಾಮಿ ಚಾಲುಕ್ಯರು

ಇವರು ಕ್ರಿ.ಶ. ೬ನೇ ಶತಮಾನದಲ್ಲಿ ರಾಜ್ಯ ಸ್ಥಾಪಿಸಿದರು. ಚಾಲುಕ್ಯದೊರೆ ಒಂದನೇ ಕೀರ್ತಿವರ್ಮನು ಕದಂಬರನ್ನು ಕೊಂಕಣದ ಮೌರ್ಯರನ್ನು ಸೋಲಿಸಿ ಆಳ್ವಿಕೆ ನಡೆಸಿದ ನಂತರ ಇಮ್ಮಡಿ ಪುಲಿಕೇಶಿಯ ಶಾಸನ ಕುರುಗೋಡಿನಲ್ಲಿ ದೊರಕಿದೆ. ಈತನ ಮಕ್ಕಳಾದ ಆದಿತ್ಯಾವರ್ಮ ಮತ್ತು ಚಂದ್ರಾದಿತ್ಯರು ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯ ಭಾಗಗಳನ್ನು ಆಳುತ್ತಿದ್ದರು.[೩೫]

## ರಾಷ್ಟ್ರಕೂಟರು

ತಮ್ಮ ಪರಾಕ್ರಮದಿಂದ ದಕ್ಷಿಣ ಭಾರತವನ್ನೆಲ್ಲ ತಮ್ಮ ತೋಳ್‌ಬಲದಿಂದ ಗೆದ್ದು, ತಲಕಾಡಿನ ಗಂಗರನ್ನು ತಮ್ಮ ಸಾಮಂತರನ್ನಾಗಿ ಮಾಡಿಕೊಂಡು ಬಳ್ಳಾರಿ, ಚಿತ್ರದುರ್ಗ, ಅನಂತಪುರ, ತುಮಕೂರು ಮುಂತಾದ ಪ್ರದೇಶಗಳನ್ನಾಳಿದರು. ಆಗ ಈ ಪ್ರಾಂತ್ಯಗಳು 'ನೊಳಂಬವಾಡಿ' ಎಂದು ಕರೆಸಿಕೊಳ್ಳುತ್ತಿತ್ತು. ಕೂಡ್ಲಿಗಿ ಹೋಬಳಿಯು ನೊಳಂಬವಾಡಿಯ ಭಾಗವಾಗಿತ್ತು. ಈಗಿನ ಹರಪನಹಳ್ಳಿ, ಕೂಡ್ಲಿಗಿಯ ಪಶ್ಚಿಮ ಭಾಗಗಳು[೩೬] ಹಡಗಲಿ ತಾಲ್ಲೂಕಿನ ಕೆಲ ಪ್ರದೇಶಗಳು ಈಗಿನ ಹಗರಿಬೊಮ್ಮನಹಳ್ಳಿಯ ಕೋಗಳಿ, ಹನಸಿ(ಹಿಂದೆ ಕೂಡ್ಲಿಗಿ ಭಾಗಗಳು) ಕೂಡ್ಲಿಗಿ ಹೋಬಳಿಯ ಮೊರಬ, ನೊಳಂಬವಾಡಿಯ ಕೋಗಳಿ ೫೦೦ಕ್ಕೆ ಒಳಪಟ್ಟಿದ್ದು ಚಾಲುಕ್ಯರು ಕೋಗಳಿನಾಡನ್ನು ಆಳುತ್ತಿದ್ದರು.

## ಹೊಯ್ಸಳರು

ಕ್ರಿ.ಶ. ೧೧೦೮ರಿಂದ ೧೩೧೧ ರವರೆಗೆ ಬಳ್ಳಾರಿ ಜಿಲ್ಲೆಯೂ ಸೇರಿದಂತೆ ದಕ್ಷಿಣ ಭಾಗವೆಲ್ಲ ಹೊಯ್ಸಳ ಸಾಮ್ರಾಜ್ಯದ ಭಾಗವಾಗಿತ್ತು. ವಿಷ್ಣುವರ್ಧನ ಬಳ್ಳಾರಿ, ರಾಯಚೂರು ಗೆದ್ದ. ಉಚ್ಚಂಗಿ ಪಾಂಡ್ಯರು ಹೊಯ್ಸಳರ ಸಾಮಂತರಾಗಿದ್ದರು. ಕಾಲಾಂತರದಲ್ಲಿ ಸೇವುಣರ ಸಿಂಘಣ ಮತ್ತು ಅವನ ಮಗ ಕೃಷ್ಣರ ವಂಶದಲ್ಲಿ ಕೋಗಳಿ ನಾಡು, ದಾವಣಗೆರೆ ಭಾಗಗಳಿದ್ದವು.[೩೭]

## ಕುಮ್ಮಟ ದುರ್ಗದ ಅರಸರು

೧೩೧೧ರಲ್ಲಿ ಮಲ್ಲಿಕಾಪುರನ ದಾಳಿಯಿಂದ ಹೊಯ್ಸಳರು ಅವನತಿ ಕಡೆ ಸಾಗಿ[೩೮] ಕಂಪಲಿರಾಯ ಮತ್ತು ಕುಮಾರರಾಮನಿಂದ ಆರಂಭವಾದ ಇತಿಹಾಸ ಮುಂದೆ ಪಾಳೇಗಾರನ ಹುಟ್ಟಿಗೂ ಕಾರಣವಾಯಿತು. ಹರಿಹರ ಬುಕ್ಕರು ಕಂಪಲಿರಾಯನ ಆಶ್ರಯ ಬಯಸಿ ೧೩೩೬ರಲ್ಲಿ ವಿಜಯನಗರ ಸ್ಥಾಪನೆಗೆ ಕಾರಣರಾದರು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಪೂರ್ವದಲ್ಲಿ ಕಂಪಲಿರಾಯನು ಕ್ರಿ.ಶ. ೧೩೨೦ರಲ್ಲಿ ಸ್ವತಂತ್ರನಾದ ಸೇವುಣರ ಸಾಮಂತ ಅರಸನಾಗಿದ್ದ.[೩೯] ಕಂಪಲಿರಾಯ ಕಾಲನಂತರ ಸ್ವತಂತ್ರನಾಗಿ ಕುಮ್ಮಟದುರ್ಗವನ್ನು(ಕಂಪಲಿ) ರಾಜದಾನಿ ಮಾಡಿಕೊಂಡಿದ್ದ. ನಂತರ ಬಂದ ಕುಮಾರರಾಮ ಜರಿಮಲೆ ಮತ್ತು ಗುಡೇಕೋಟೆ ಅರಸರೊಂದಿಗೆ ರಾಜಕೀಯ ಒಡನಾಟ ಇಟ್ಟುಕೊಂಡಿರುವುದು ಚರಿತ್ರೆ ಪುಟಗಳಿಂದ ಗೊತ್ತಾಗುತ್ತದೆ. ಗುಡೇಕೋಟೆ ಮತ್ತು ಜರಿಮಲೆ ನಾಯಕರು ಕೂಡ್ಲಿಗಿ ಮತ್ತು ಹೋಬಳಿ ಪ್ರದೇಶಗಳನ್ನು ತಮ್ಮ ಆಳ್ವಿಕೆ ಒಳಪಡಿಸಿಕೊಂಡಿರುವುದು ಇತಿಹಾಸ ಆಧಾರಗಳಿಂದ ಗುರ್ತಿಸಬಹುದು.

## ವಿಜಯನಗರ ಅರಸರು

ಹದಿನಾಲ್ಕನೆ ಶತಮಾನದ ಪೂರ್ವಾರ್ಧದಲ್ಲಿ(ದಕ್ಷಿಣ ಭಾರತದಲ್ಲಿ) ವಿಜಯನಗರ ಸ್ಥಾಪನೆ ಕರ್ನಾಟಕದ ಇತಿಹಾಸ ಪುಟಗಳಲ್ಲಿ ಒಂದು ಮಹತ್ವದ ಘಟ್ಟ ಮಲ್ಲಿಕಾಪುರನ ದಾಳಿಗಳಿಂದ ತತ್ತರಿಸಿದ ದಕ್ಷಿಣ ಭಾರತ

ಅಸಂಘಟಿತ ಸ್ಥಿತಿಯಲ್ಲಿತ್ತು. ಅವನ ದಾಳಿಗಳನ್ನು ತಡೆಗಟ್ಟುವಷ್ಟು ಸಮರ್ಥ ಅರಸರ ಕೊರತೆ ಎದ್ದು ಕಾಣುತ್ತಿತ್ತು. ಅಂತಹ ಸಂದರ್ಭದಲ್ಲಿ ಹುಟ್ಟಿಕೊಂಡ ಮಹಾಸಾಮ್ರಾಜ್ಯವೇ ವಿಜಯನಗರ. ಕ್ರಿ.ಶ. ೧೩೩೬ರಲ್ಲಿ ಸ್ಥಾಪನೆಗೊಂಡ ಇದು ೧೫೬೫ ರವರೆಗೆ ನಾಲ್ಕು ಪ್ರಮುಖ ವಂಶಗಳ ಆಳ್ವಿಕೆ ಕಂಡು ಇವರ ಅಧೀನದಲ್ಲಿ ಅನೇಕ ಅನೇಕ ರಾಜ, ಮಹಾರಾಜರು, ಸಾಮಂತರು ಇವರ ತೋಲ್ಬಲಕ್ಕೆ ಶರಣಾಗಿ ರಾಜ್ಯಭಾರ ಮಾಡಿದರು. ವಿಜಯನಗರದ ಅರಸರು ಸುಮಾರು ೨೦೦ ವರ್ಷಕಾಲ ಸಾಮ್ರಾಜ್ಯ ಮೆರೆಸಿದ ಕಾಲವದು. ಈ ಅವಧಿಯಲ್ಲಿ ಕೂಡ್ಲಿಗಿ ಹೋಬಳಿ ಸೇರಿದಂತೆ ಬಳ್ಳಾರಿ ಜಿಲ್ಲೆಯ ಎಲ್ಲಾ ಪ್ರದೇಶಗಲ್ಲದೆ, ನೆರೆಹೊರೆಯ ರಾಜ್ಯಗಳು ಇವರ ಆಡಳಿತಕ್ಕೆ ಒಳಪಟ್ಟವು. ವಿಜಯನಗರದ ಅರಸರ ಶಾಸನಗಳು ಕೂಡ್ಲಿಗಿ ಹೋಬಳಿಯ ಮೊರಬ, ದೇವಲಾಪುರ, ಚಿಕ್ಕಕೆರ್‍ನಾಳ್ಳಿ(ಈಗ ಸಂಡೂರು ತಾಲ್ಲೂಕು) ಗ್ರಾಮಗಳಲ್ಲಿ ಕಂಡುಬರುತ್ತವೆ ಮತ್ತು ಜರಿಮಲೆ ಹಾಗೂ ಗುಡೇಕೋಟೆ ಇವರ ಕಾಲದ ಪಾಳೇಪಟ್ಟುಗಳಾಗಿ ಗುರ್ತಿಸಿಕೊಂಡಿದ್ದವು. ವಿಜಯನಗರದ ಅರಸರು ಇವರಿಗೆ ಕೆಲವು ಪ್ರದೇಶಗಳನ್ನು ಬಿಟ್ಟುಕೊಟ್ಟು ಅವರಿಂದ ಸೈನ್ಯದ ನೆರವನ್ನು ಪಡೆಯಲಾಗುತ್ತಿತ್ತು ಎನ್ನಲಾಗುತ್ತದೆ.

ವಿಜಯನಗರ ಕಾಲದಲ್ಲಿ ಕೂಡ್ಲಿಗಿ ಮತ್ತು ಸುತ್ತಮುತ್ತಲಿನ ಪ್ರದೇಶಗಳು ಸೈನಿಕರನ್ನು, ಯುದ್ಧ ಸಾಮಗ್ರಿ, ಆಹಾರಧಾನ್ಯ ಈ ಪ್ರದೇಶಗಳಿಂದ ಪೂರೈಸಲಾಗುತ್ತಿತ್ತು ಎಂಬುದು ಸ್ಥಳೀಯ ಮಾಹಿತಿಗಳಿಂದ ತಿಳಿದುಬರುತ್ತದೆ. ಯುದ್ಧ ಸಾಮಗ್ರಿಗಳಾದ ಖಡ್ಗ, ಗುರಾಣಿ, ಈಟಿ, ಬಾಕು, ಕತ್ತಿ ಮುಂತಾದವು. ಈ ಪ್ರದೇಶದ ಊದುಕುಲುಮೆಗಳಿಂದ ತಯಾರಿಸಲಾಗುತ್ತಿದ್ದವು. ಆಹಾರ ಧಾನ್ಯವಾದ ಜೋಳ(ವಿಶೇಷವಾಗಿ) ಇಲ್ಲಿಂದಲೇ ಹೆಚ್ಚು ತರಿಸಿಕೊಳ್ಳಲಾಗುತ್ತಿತ್ತು ಎಂಬ ವಿಷಯ ಇತಿಹಾಸಜ್ಞರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕೂಡ್ಲಿಗಿ ಹೋಬಳಿಯಲ್ಲಿ ಬೇಡ ಬುಡಕಟ್ಟಿನ ಜನರು ಹೆಚ್ಚಾಗಿರುವುದರಿಂದ ದೈಹಿಕವಾಗಿ ಬಲಿಷ್ಠರು ಎದೆಗಾರಿಕೆಯ ವೀರರಾಗಿದ್ದರಿಂದ ಅರಸರು ಈ ಭಾಗದ ಜನರನ್ನು ತಮ್ಮ ಯುದ್ಧಗಳಲ್ಲಿ ಬಳಸಿಕೊಳ್ಳುತ್ತಿದ್ದರು. ಅಂತವುಗಳಲ್ಲಿ ವಿರುಪಾಪುರ, ಕೂಡ್ಲಿಗಿ, ಜರಿಮಲೆ, ಗುಡೇಕೋಟೆ ಮುಂತಾದ ಗ್ರಾಮವಾಸಿಗಳು ಸೇರಿದ್ದರು ಎನ್ನಲಾಗುತ್ತದೆ.

ಹಾಗಾಗಿ ಕೂಡ್ಲಿಗಿ ತಾಲ್ಲೂಕಿನ ಪಾಳೆಗಾರರು ವಿಜಯನಗರಕ್ಕೆ ನಿಷ್ಠೆಯಿಂದ ನಡೆದುಕೊಂಡರು. ಕ್ರಿ.ಶ. ೧೫೬೫ರ ರಕ್ಕಸತಂಗಡಿ ಯುದ್ಧ ತರುವಾಯ ಅನಾಥವಾದ ವಿಜಯನಗರ ತನ್ನ ಗತವೈಭವ ಮರುಕಳಿಸಲಾಗಲಿಲ್ಲ, ಪಾಳೆಯಗಾರರೆಲ್ಲ ಸ್ವತಂತ್ರರಾದರು. ಅದರಲ್ಲೂ ಇವರಲ್ಲಿ ನಾಯಕ ಜನಾಂಗ ಪಾಳೇಗಾರರು, ಸಂಡೂರಿನವರು ಮಾತ್ರ ಮರಾಠಿ ಮೂಲದವರು. ನಮ್ಮ ಜಿಲ್ಲೆಯ ಹಾಗೂ ರಾಯದುರ್ಗ ಮತ್ತು ಚಿತ್ರದುರ್ಗದ ಪಾಳೆಯಗಾರರಲ್ಲಿ ವೈವಾಹಿಕ ಸಂಬಂಧಗಳಾಗಿದ್ದವು. ಹಲವಾರು ಸಾರಿ ಪರಸ್ಪರ ದ್ವೇಷ ಹೋರಾಟಗಳೂ ನಡೆಯುತ್ತಿದ್ದವು. ಯಾರು ಸ್ವತಂತ್ರ ರಾಜ್ಯ ಸ್ಥಾಪನೆ ಹಾಗೂ ವಿಸ್ತಾರಗಳನ್ನು ಮಾಡುವಷ್ಟು ಸಮರ್ಥರಾಗಲಿಲ್ಲ, ದೊಡ್ಡ ರಾಜರ ವಿರುದ್ಧ ಹೋರಾಡಿದರೂ ಅದು ತಾತ್ಕಾಲಿಕವಾಗಿರುತ್ತಿತ್ತು. ಉದಾಹರಣೆಗೆ ಬಳ್ಳಾರಿಯ ಕೋಟೆಯನ್ನು ಶಿವಾಜಿ ಮುತ್ತಿದಾಗ ಪಾಳೆಯಗಾರರ ವಿಧವೆ, ಪತ್ನಿ ೨೭ ದಿನಗಳವರೆಗೆ ಸೋಲದೆ ಹೋರಾಡಿದಳು. ಪೇಶ್ವೆ ಬಾಜೀರಾವ್ ಸಂಡೂರನ್ನು ಮುತ್ತಿದಾಗ ಗೆಲ್ಲಲಾಗಲಿಲ್ಲ. ಕೂಡ್ಲಿಗಿಯಿಂದ ಸಮೀಪವಿರುವ ವೀರನದುರ್ಗವನ್ನು ಒಮ್ಮೆ ಟಿಪ್ಪು ಮುತ್ತಿ ಅದನ್ನು ವಶಪಡಿಸಿಕೊಳ್ಳಲಾರದೆ ಸೋತುಹೋದ ಈ ಜಿಲ್ಲೆಯ ಪಾಳೇಗಾರರಲ್ಲಿ ಪ್ರಬಲರಾಗಿದ್ದರೆಂದರೆ ಹರಪನಹಳ್ಳಿಯವರು ಅವರಲ್ಲಿ ಸೋಮಶೇಖರನಾಯಕ ಅತಿ ಪ್ರಸಿದ್ಧ ದೊರೆ. ಇವನ ಆರಾಧ್ಯದೈವ ಮೊರಬದ ಶ್ರೀ ವೀರಭದ್ರೇಶ್ವರ ಇವನ ಮನೆಯ ದೈವವಾಗಿತ್ತು ಕೂಡ.

## ಕೂಡ್ಲಿಗಿ ಹೋಬಳಿಯ ರಾಜಕೀಯ ಚರಿತ್ರೆ

ಗುಡೇಕೋಟೆ ಪಾಳೇಗಾರರ ಕಾಲ ಶಕ ೧೪೨೮(೧೫೦೬)ನೇ ಪ್ರಭವನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿಯಂದು ರಾಜ್ಯ ಸ್ಥಾಪನೆಯ ವಿಷಯ ತಿಳಿಯುತ್ತದೆ. ಕ್ರಿ.ಶ. ೧೫೦೬ರ ಸುಮಾರಿಗೆ ಗುಡೇಕೋಟೆ ಸಂಸ್ಥಾನ ಗಂಡಳನಾಯಕರ ನೇತೃತ್ವದಲ್ಲಿ ಸ್ಥಾಪನೆಯಾಯಿತಂತೆ. ಇವನು ಕುಮಾರರಾಮನ ಸ್ನೇಹಿತನಾದ ಗಡಿಯಾಂಕಭೀಮನ ವಂಶದವನು ಹೀಗಿದ್ದರೂ ಗಂಡಿವಂತ(ಯಾಂಕ) ಭೀಮ, ಗಂಡಳನಾಯಕ ಮತ್ತು ಹಿರೇಬೊಮ್ಮಂತ ನಾಯಕರೇ ಮೂಲಪುರುಷರು ಎನ್ನಬಹುದು. ಗಂಡಳನಾಯಕ(೧೫೦೬–೧೫೨೧) ೧೫ ವರ್ಷ ಆಳ್ವಿಕೆ ಮಾಡಿದ ನಂತರ ತರುವಾಯ ಪೆನ್ನಪ್ಪನಾಯಕ(೧೫೨೧–೪೧) ಪಾಳೇನಾಯಕ(೧೫೪೧–೫೮) ಕೆಮ್ಮಯ್ಯರಾಜ(೧೫೫೮–೧೬೦೨) ರಾಮಪ್ಪನಾಯಕ(೧೬೦೨–೩೪) ಆಳ್ವಿಕೆ ಮಾಡಿದ ಉಲ್ಲೇಖವಿದೆ.

ಪ್ರಮುಖವಾಗಿ ಬೊಮ್ಮಂತ ರಾಜನ ಹೆಸರು ಗುಡೇಕೋಟೆಯ ಚರಿತ್ರೆಯ ಪ್ರಾತಃ ಸ್ಮರಣೆಯ. ರಾಮಪ್ಪನಾಯಕನ ಹಿರಿಮಗನೇ ಬೊಮ್ಮಂತರಾಜ(೧೬೩೭–೭೬) ಇವನು ಗುಡೇಕೋಟೆ ಸಂಡೂರು ಪೊಗದಿಕೊಟ್ಟ ಆಂಧ್ರ ಭಾಗದ ಹಳ್ಳಿಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದ್ದನು.[೪೦] ಅದರಲ್ಲಿ ರಾಯದುರ್ಗವು ಸೇರಿತ್ತು. ಮೊಳಕಾಲ್ಮೂರು, ಚಳ್ಳಕೆರೆ, ಜಗಳೂರು, ಕೂಡ್ಲಿಗಿ ಪ್ರದೇಶಗಳು ಇವನ ವ್ಯಾಪ್ತಿಗೆ ಸೇರಿದ್ದವು. ಈ ಅಂಶ ಗಮನಿಸಿದರೆ ಯಾವುದೇ ಒಂದು ಗ್ರಾಮ, ಊರು, ಒಬ್ಬ ಅರಸನ ವ್ಯಾಪ್ತಿಗೆ ಒಳಪಡಬೇಕಾದರೆ ಆ ಊರುಗಳು ಹಿಂದಿನಿಂದ ಬೆಳೆದುಬಂದಿರಬೇಕಾಗುತ್ತದೆ. ಶತಮಾನಗಳಷ್ಟು ಇತಿಹಾಸ ಹೊಂದಿರುತ್ತವೆ. ಹಾಗಾಗಿ ಕೂಡ್ಲಿಗಿ ಮತ್ತು ಹೋಬಳಿ ಗ್ರಾಮಗಳು ಕುಮಾರರಾನ ಕಾಲದಲ್ಲಿಯೇ ಬೆಳವಣಿಗೆ ಹೊಂದಿ ವಿಜಯನಗರ ವೇಳೆಗೆ ಚೇತರಿಸಿಕೊಂಡು ಪಾಳೇಗಾರರ ಕಾಲಕ್ಕೆ ಗುರ್ತಿಸಿಕೊಂಡಂತೆ ಕಂಡುಬರುತ್ತದೆ.

## ಜರಿಮಲೆ ಪಾಳೇಯಗಾರ ಕಾಲದಲ್ಲಿ ಕೂಡ್ಲಿಗಿ

ಕೂಡ್ಲಿಗಿಯಿಂದ ಕೆಲವೇ ೧೪ ಕಿ.ಮೀ. ಅಂತರದಲ್ಲಿ ಇರುವ ಜರಿಮಲೆ, ಕೂಡ್ಲಿಗಿ ಹೋಬಳಿ ಮತ್ತು ಕೇಂದ್ರ ಸ್ಥಾನದೊಂದಿಗೆ ಚಾರಿತ್ರಿಕ ಸಂಬಂಧ ಹೊಂದಿರುವುದಷ್ಟು ಈವರೆಗೆ ದೊರೆತಿರುವ ಅಂಶಗಳಿಂದ ವೇದ್ಯವಾಗುತ್ತಿದೆ. ಜರಿಮಲೆ ನಾಯಕ ಪಾಳೇಗಾರರ ಮೂಲ ಕೆದುಕುವುದಾದರೆ ಜರಿಮಲೆ ಮೂಲಪುರುಷ ಆಂಧ್ರದ ಕಂಚಿ, ಕದ್ರಿಯಿಂದ ಬಂದವರೆಂದು ಹೇಳಲಾಗುತ್ತದೆ. ಇನ್ನೊಂದು ಮೂಲದ ಪ್ರಕಾರ ಕುಮಾರರಾಮನ ವಂಶಜರೆಂದು ತಿಳಿಯುತ್ತದೆ. ಎಂ.ಎಂ. ಕಲ್ಬುರ್ಗಿಯ ಕರ್ನಾಟಕದ ಕೈಫಿಯತ್ತಿನಲ್ಲಿ ಕಣಕುಪ್ಪೆ, ಕೋಟೆ ಕಟ್ಟಿ, ಚಿಕ್ಕಣ್ಣನಾಯಕ ಪಟ್ಟ ಮಾಡಿಕೊಂಡ ನಂತರ ದುರ್ಗ(ಚಿತ್ರದುರ್ಗ)ಕ್ಕೆ ಹೋಗುವಾಗ ದಾರಿ ಮಧ್ಯೆ ಗುಡ್ಡದಲ್ಲಿ ಗಿಡ, ಮರಗಳು ಬಹಳ. ಜರಿಮಲೆ ಬೇಡರು ಈ ಗುಡ್ಡದಲ್ಲಿ ಕಳ್ಳರು ಇಪ್ಪತ್ತು ಜನ ಸೇರಿಕೊಂಡು ಬಹು ಉಪದ್ರವ ಮಾಡುತ್ತ ಇದ್ದಲ್ಲಿ 'ಕುಮಾರ'ರಪ್ಪ ಅವರು ಮುನ್ನೂರು, ನಾನ್ನೂರು ಜನ ತೆಗೆದುಕೊಂಡು ಈ ಗುಡ್ಡದಲ್ಲಿ ಇದ್ದಂತಾ ಕಳ್ಳರನ್ನು ಕೆಲವರು ಸಿಕ್ಕಿದಂತವರನ್ನು ಹೊಡೆದುಹಾಕಿದರು. ಕೆಲವರು ಓಡಿ ಹೋದರು. ಅಲ್ಲಿ ಗುಡ್ಡಕ್ಕೆ ಕೋಟೆ ಕಟ್ಟಿದಾಗ ಗುಡೇಕೋಟೆಯಾಯಿತೆಂದು ಹೇಳಲಾಗಿದೆ.[೪೧]

ಗುಡೇಕೋಟೆ ಪಾಳೇಯಗಿಂತ ಪೂರ್ವದಲ್ಲಿಯೇ ಜರಿಮಲೆ ಸ್ಥಾಪನೆಯಾದಂತಿದೆ. ವಿಜಯನಗರದ ಅರಸರು ೧೫೬೪ರ ಸುಮಾರಿಗೆ ತಮ್ಮ ಅಧೀನದಲ್ಲಿದ್ದ ತಳವಾರ, ಪೌಜುದಾರ ಮೊದಲಾದವರಿಗೆ ಆಯಾ ಸ್ಥಳಗಳಲ್ಲಿ ನಡೆಸುತ್ತಿದ್ದ ಅಧಿಕಾರವನ್ನು ಅವರಿಗೆ ಬಿಟ್ಟುಕೊಟ್ಟರು. ಅದರಂತೆ ಬೊಮಂತರಾಜ ಕುಮಾರರಾಮನ ವಂಶಕ್ಕೆ ಸೇರಿರಬಹುದು ಎನ್ನಲಾಗಿದೆ. ಹಿಂದೆ ಮಾಡಿಕೊಂಡು ಬಂದಿದ್ದ ನಾಡತಳವಾರಿಕೆ ಕಾವಲಿಯನ್ನು

ದಯಪಾಲಿಸಬೇಕೆಂದು ಕೇಳಿಕೊಂಡಾಗ ಎಂಟು ಸ್ಥಳಗಳನ್ನು ಬಿಟ್ಟುಕೊಟ್ಟರು. ಅವನಿಗೆ ಏಳುಜನ ಮಕ್ಕಳಾದರು. ಮಲ್ಲಿಕಾರ್ಜುನ ನಾಯಕ ಜರಿಮಲೆ ಆಳುತ್ತಿದ್ದ, ಇವನ ಕಾಲದಲ್ಲಿ ಬದಲಾವಣೆಗಳಾದವು.

ಜರಿಮಲೆ ಸಂಸ್ಥಾನದ ಮೂಲಪುರುಷ ಪಾಪಣ್ಣನಾಯಕ(ಪಾಪನಾಯಕ) ವಿಜಯನಗರದ ಸಾಳುವ ವೀರನರಸಿಂಹ(೧೪೯೧-೧೫೦೫)ನ ಸೇವಕನಾಗಿದ್ದನಂತೆ. ತನ್ನ ಸೇವೆ ನಿಷ್ಠೆಯಿಂದ ಅರಸನಿಗೆ ಒಪ್ಪಿತನಾಗಿದ್ದ ಈತ ಕಾಂಚೀಪುರಂಗೆ ದೊರೆ ಹೋದಾಗ ಆತನೊಡನಿದ್ದು ವಿಶ್ವಾಸಕ್ಕೆ ಪಾತ್ರನಾದ ವಿಜಯನಗರದಲ್ಲಿ ನಡೆಯುತ್ತಿದ್ದ ಗಲಭೆ-ಸಂಘರ್ಷಗಳನ್ನು ಅಡಗಿಸಲು ಈತ ಸಿದ್ಧನಾದನು. ಪಾಪಣ್ಣನಿಗೆ ವಡ್ಡು, ದರೋಜಿಗಳು ಅರಸನಿಂದ ಬಳುವಳಿಯಾಗಿ ಬಂದವು.

ಮೆಕೆಂಜಿಯ ದಾಖಲೆಗಳಲ್ಲಿ ಪಾಪಣ್ಣನಾಯಕನೆಂದು ಇತರ ಆಕರಗಳಲ್ಲಿ ಪೆನ್ನಪ್ಪನಾಯಕನೆಂದು ಇವರ ಮೂಲವಂಶೀಕರನ್ನು ಹೆಸರಿಸಲಾಗಿದೆ. ಪಾಪಣ್ಣನಾಯಕ ಪೆನ್ನಪ್ಪನಾಯಕನ ತಂದೆಯಾಗಿರಬೇಕು. ಇವರು ಆಂಧ್ರದ ಕದ್ರಿಯಿಂದ ವಲಸೆ ಬಂದವರು ಎಂಬುದು ಮುಂಚೆ ಉಕ್ತಿಸಲಾಗಿದೆ. ಆರಂಭದಲ್ಲಿ ಹೊಸ ಸ್ಥಳದಲ್ಲಿನ ಜೀವನ ಕಷ್ಟವಾದ್ದರಿಂದ ೨ನೇ ತಲೆಮಾರಿನವರು ಆಳ್ವಿಕೆಗೆ ಮುಂದಾಗಿರಬೇಕು.[೪೨]

ಪೆನ್ನಪ್ಪನಾಯಕ ತನ್ನ ತಂದೆಗೆ ಬಳುವಳಿಯಾಗಿ ಬಂದಿದ್ದ ಗ್ರಾಮಗಳಿಗೆ ಒಡೆಯನಾಗುತ್ತಾನೆ. ಇದಕ್ಕೆ ವಿಜಯನಗರದ ಅರಸ ಅಚ್ಚುತದೇವರಾಯ(೧೫೨೯-೧೫೪೨)ನಿಂದ ಜಹಗೀರು ಸಹ ಲಭಿಸಿತ್ತು. ಈ ಐತಿಹಾಸಿಕ ಸ್ಥಳದಲ್ಲಿ ಕೋಟೆ ನಿರ್ಮಿಸಿ ಆಳುತ್ತಾನೆ. ಸಂಡೂರು ಪ್ರದೇಶವು ಇವನಿಗೆ ಸೇರಿತ್ತು, ಸಿದ್ಧೋಜಿ ಘೋರ್ಪಡೆಯ ನಂತರ ಸಂಡೂರು ಪ್ರದೇಶ ಜರಿಮಲೆಗೆ ಕೈತಪ್ಪಿತು.

ವೀರನರಸಿಂಹನು(೧೫೦೫-೧೫೦೯) ಗುಡೇಕೋಟೆ, ಮಲೆಭೂಪ ಸಮುದ್ರ ಗ್ರಾಮಗಳನ್ನು ಇವನಿಗೆ ಬಿಟ್ಟುಕೊಡುತ್ತಾನೆ. ಅಚ್ಯುತರಾಯ ಜರಿಮಲೆ ಪೆನ್ನಪ್ಪನಿಗೆ ೫೦೦ ಅಶ್ವದಳ, ೩೦೦ ಕಾಲ್ದಳಪಡೆ ಇಟ್ಟುಕೊಳ್ಳಲು ಅನುಮತಿ ನೀಡಿ ೩೫.೧೫೦ ಮಹಮದ್‌ಶಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಿಗೆ ಮಾಗಣಿಗಳನ್ನು ನೀಡಿದ್ದನೆಂದು ಮನ್ರೋ ವರದಿಗಳಿಂದ ವೇದ್ಯವಾಗುತ್ತದೆ. ಕೃಷ್ಣದೇವರಾಯನ ನಂತರ ರಾಜಕೀದಲ್ಲಿ ಅನೇಕ ಪಲ್ಲಟಗಳಾದವು. ಅಚ್ಚುತರಾಯ ತನ್ನ ಸಂಸ್ಥಾನಗಳ ಮೇಲೆ ಮಹಮ್ಮದೀಯರ ಆಕ್ರಮಣವನ್ನು ತಡೆಯಲು ಯೋಜನೆಗಳನ್ನು ಕೈಗೊಂಡನು, ಅದರಂತೆ ಕನಕಗಿರಿ, ರಾಯದುರ್ಗ, ಸಿರಾ, ಬಸವಪಟ್ಟಣ, ಉಜ್ಜಿನಿ ಮೊದಲಾದ ಕೇಂದ್ರಗಳ ನಾಯಕರಿಗೆ ಬಿಗಿಭದ್ರತೆಯಿಂದ ಇರುವಂತೆ ಆದೇಶಿಸಿದ ಇದರಂತೆ ಬಳ್ಳಾರಿ, ಗುತ್ತಿ, ಸಿರಾ, ಬಸವಾಪಟ್ಟಣ, ಪಾವಗಡ, ಕಣಕುಪ್ಪೆ, ಕುಂದರ್ಷಿ, ನಾರಾಯಣದೇವರಕೆರೆ, ಡಣಾಯಕನಕೆರೆ, ಸಂಡೂರು ಕುಡುತಿನಿ ಪಾಳೆಯಗಾರರಿಗೆ ಸಜ್ಜಗಲು ತಿಳಿಸಿದ. ಸುಲ್ತಾನರ ಒಳಸಂಚು ದಾಳಿ ತಪ್ಪಿಸಲು ನಾಯಕರ ಸಹಾಯಕ್ಕೆ ಮುಂದಾದ ಪೆನ್ನಪ್ಪನಾಯಕನು, ಕಣಕುಪ್ಪೆ, ಕೂಡಲಗಿ(ಕೂಡ್ಲಿಗಿ) ನಾರಾಯಣ ದೇವರಕೆರೆ, ಡಣಾಯಕನಕೆರೆ, ಸಂಡೂರು ಪ್ರದೇಶಗಳನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ. ಹೀಗೆ ಪೆನ್ನಪ್ಪನಾಯಕ ಉಜ್ಜಿನಿಯಲ್ಲಿರುವಾಗ ಬಸವಂತರಾಜ, ಭೂಮಿರಾಜ, ಬೂದಿಸಿದ್ದರಾಜ ಎಂಬ ೩ ಜನ ಮಕ್ಕಳು ತಂದೆಯ ಆಜ್ಞೆಯಿಂದ ರಾಜ್ಯ ಪರಿಪಾಲಿಸುತ್ತಿದ್ದರು.

ಭೂಮಿರಾಜ ಅಪ್ರತಿಮ ಶಕ್ತಿಶಾಲಿ ಸಾಹಸದೊರೆ ವಿಜಯಪುರದ ಬಾದ್‌ಷಹನ ಕುದುರೆ ಮೇಲೆ ಸವಾರಿ ಮಾಡಿ ಪಳಗಿಸಿ 'ಜಮ್ಮದಾರ ಗುಡ್ಡಯ ಜರಿಮಲ್ಲ' ಎಂಬ ಬಿರುದು ಪಡೆದು ವಾಪಸ್ಸಾದ ಜೊತೆಗೆ

೪ ಮಾಗಣಿಗಳು ರೂ. ೨,೦೦೦ ಕಾಣಿಕೆ, ೨೦೦೦ ಕಾಲಾಳು, ೩೦೦ ಅಶ್ವದಳನ್ನು ಇಟ್ಟುಕೊಳ್ಳಲು ಅನುಮತಿಸಿದ್ದ ಸುಲ್ತಾನ ಭೂಮಿರಾಜ ಸುಲ್ತಾನನ ಸ್ನೇಹಕ್ಕೆ ಮೆಚ್ಚಿಗೆಯಿಂದಲೇ ಆಳುತ್ತಿದ್ದ ಕಾಲದಲ್ಲಿ ಯುದ್ಧ ಸಂಘರ್ಷ ಹೊಂದಾಣಿಕೆಗಳು ಆಗಿ ಸುಲ್ತಾನ ವಿರೋಧಿಯಾಗಿ ಜರಿಮಲೆಯಲ್ಲಿ ಇಮ್ಮಡಿನಾಯಕ ಅಧಿಕಾರಕ್ಕೆ ಬಂದಾಗ ಸುಲ್ತಾನ ಉಜ್ಜನಿಗೆ ಮುತ್ತಿಗೆ ಹಾಕಿದ ಜರಿಮಲೆ ನಾಯಕನನ್ನು ಶಿಕ್ಷಿಸಿದ. ಮರಳಿ ಉಜ್ಜನಿ ಪಡೆಯಲು ಇಮ್ಮಡಿನಾಯಕನ ಹತ್ತಿರ ಧನವಿರಲಿಲ್ಲ. ಇದೇ ಸಂದರ್ಭದಲ್ಲಿ ಹರಪನಹಳ್ಳಿ ನಾಯಕರು ವಿಜಯಪುರದ ಸುಲ್ತಾನರಿಗೆ ೭೦೦ ಪಗೋಡ ಕೊಟ್ಟು ಉಜ್ಜನಿಯನ್ನು ಪಡೆದುಕೊಂಡರು. ಹೀಗೆ ನಾಯಕ ಕೂಡಲಿಗೆ(ಕೂಡ್ಲಿಗಿ) ಬರುತ್ತಿರುವಾಗ ಚಿತ್ರದುರ್ಗದವರು ಕಣಕುಪ್ಪೆಯನು ಕಬಳಿಸಿಕೊಂಡರು. ಕೊನೆಗೆ ದುರ್ಗದವರೊಂದಿಗೆ ಸ್ನೇಹ ಗಳಿಸಿದ ಇಮ್ಮಡಿನಾಯಕ 'ಕೂಡಲಗಿ'ಯಿಂದ ಭೂಪಸಮುದ್ರಕ್ಕೆ ರಾಜಧಾನಿಯನ್ನು ವರ್ಗಾಯಿಸಿದ, ಆಗ ಹರಪನಹಳ್ಳಿ ನಾಯಕರು 'ಕೂಡಲಗಿ'ಯನ್ನು ಪಡೆದುಕೊಂಡು ವೀರನದುರ್ಗ ಸೇರಿ ತನ್ನ ರಾಜ್ಯಕ್ಕೆ ಸೇರಿಸಿಕೊಂಡರು.[೪೩]

**ಸ್ಥಳನಾಮ**

ಸ್ಥಳದ ಹೆಸರು ಸಾಮಾನ್ಯವಾಗಿ ಅಲ್ಲಿನ ಭೌಗೋಳಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯತೆಯ ಲಕ್ಷಣದಿಂದ ನಿಯಂತ್ರಿತವಾಗಿರುತ್ತದೆ. ಸ್ಥಳನಾಮದ ಅಧ್ಯಯನ ಸಂದರ್ಭದಲ್ಲಿ ಅಲ್ಲಿನ ಸನ್ನಿವೇಶವನ್ನು ಗುರುತಿಸುವುದು ಅವಶ್ಯಕವಾಗಿರುತ್ತದೆ. ಯಾವುದೋ ಒಂದು ನಿರ್ದಿಷ್ಟ ಕಾಲದಲ್ಲಿ ತಲೆಯೆತ್ತಿದ ಹೆಸರಿನಲ್ಲಿ ಆ ಪರಿಸರದ ಭೂ ವಿಶೇಷತೆ ಇರುತ್ತದೆ. ಈ ತೆರನಾದ ಮೂಲಭೂತ ಅಂಶವೇ ಸ್ಥಳನಾಮಗಳ ಹುಟ್ಟಿನ ಹಿಂದಿನ ರಹಸ್ಯವಾಗಿದ್ದು, ಅವು ಶಾಶ್ವತವಾಗಿ ಉಳಿಯುವ ಕ್ರಿಯಾಶಕ್ತಿಯಾಗಿದೆ. ಕೆಲವೊಮ್ಮೆ ಸ್ಥಳನಾಮಗಳು ಚಾರಿತ್ರಿಕ ವ್ಯಕ್ತಿ, ಅಧಿಕಾರಿ, ಕುಲದೇವತೆ ಅಥವಾ ಚಾರಿತ್ರಿಕ ಮಹತ್ವದ ಘಟನೆಗಳನ್ನು ಸ್ಮರಿಸುವ ಉದ್ದೇಶದಿಂದ ಸ್ಥಳನಾಮಗಳು ಹುಟ್ಟಿಕೊಂಡಿರುತ್ತವೆ. ಎಂ.ಎಂ. ಕಲಬುರ್ಗಿ ಅವರು ಗುರುತಿಸಿರುವಂತೆ ಗ್ರಾಮಗಳ ಹೆಸರಿನ ಬಗೆಗೆ ಮೂರು ನಿಷ್ಪತ್ತಿಗಳು ಕೇಳಸಿಗುತ್ತವೆ.

೧. ಪಾಮರ ನಿಷ್ಪತ್ತಿ(ಜಾನಪದ ನಿಷ್ಪತ್ತಿ)

೨. ಪಂಡಿತ ನಿಷ್ಪತ್ತಿ

೩. ನಿಜ ನಿಷ್ಪತ್ತಿ

ಇವುಗಳಲ್ಲಿ ಮೊದಲಿನ ಎರಡು ಕಲ್ಪಕಥೆ, ಮೂರನೆಯದು ಸತ್ಯವಾಗಿರುತ್ತದೆ. ಮೊದಲ ಮತ್ತು ಎರಡನೇ ನಿಷ್ಪತ್ತಿಗೆ ಹಲವಾರು ಕಥೆಗಳು ಕೇಳಿಬಂದರೆ ನಿಜನಿಷ್ಪತ್ತಿಗೆ ಒಂದೇ ನಾಮ ಇರುತ್ತದೆ. ಕೆಲವು ಶಾಸನದಲ್ಲಿ ಉಲ್ಲೇಖಿಸಿದರೆ ಇನ್ನೂ ಕೆಲವು ಉಲ್ಲೇಖಗೊಂಡಿರುವುದಿಲ್ಲ.[೪೪]

ಸ್ಥಳನಾಮ ಅಧ್ಯಯನವು ಈ ಪರಿಸರದಲ್ಲಿನ ಅಧ್ಯಯನಕ್ಕೆ ಕೆಲವೊಂದು ಗ್ರಾಮಗಳು ಯಾವ ಕಾಲದಲ್ಲಿ ಯಾವ ಹೆಸರುಗಳನ್ನು ಪಡೆದವು. ಏಕೆ ಪಡೆದವು, ಇಂದಿನ ಹೆಸರು ಮುಂತಾದ ವಿಷಯ ಕುರಿತು ಚರ್ಚಿಸುತ್ತದೆ. ಸ್ಥಳನಾಮ ಯಾವ ಅಂಶ ಆಧರಿಸಿ ನಿರ್ಧಾರವಾಗಿತ್ತು ಎಂಬುದನ್ನು ತಿಳಿಯುವುದಲ್ಲದೆ ಒಂದು ಜನಾಂಗ, ಸಂಸ್ಕೃತಿ, ಧರ್ಮ, ಅಲ್ಲಿನ ಜೀವನಕ್ರಮ ಮುಂತಾದ ಅನೇಕ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತವೆ. ದೇ.ಜ.ಗೌ. ಅವರು ಸ್ಥಳನಾಮ ವಿಶೇಷಗಳ ೧೦ ಬಗೆಯ ವರ್ಗೀಕರಣ ಪರಿಚಯಿಸಿದ್ದಾರೆ. ಅವುಗಳ ಆಧಾರದ ಮೇಲೆ ಕೂಡ್ಲಿಗಿ ಹೋಬಳಿ ಪರಿಸರದ ಗ್ರಾಮಗಳ ಕುರಿತಾದ ಸ್ಥಳನಾಮ, ಚರಿತ್ರೆ ತಿಳಿಯುವಂತೆ ಪ್ರಯತ್ನ ಇಲ್ಲಿ ಮಾಡಲಾಗಿದೆ.

**ಸಸ್ಯವಾಚಕ**

ಮನುಷ್ಯ ಹೆಚ್ಚಾಗಿ ನಿಸರ್ಗದಲ್ಲಿಯೇ ಬದುಕಿದಂತವನು, ಹಾಗಾಗಿ ಅಲ್ಲಿನ ಅರಣ್ಯ, ಅಡವಿ ಅವನೊಂದಿಗೆ ತಳಕುಹಾಕಿಕೊಂಡ ನಿದರ್ಶನ ಕಾಣುತ್ತೇವೆ.

**ಅಡವಿಶೂರನಹಳ್ಳಿ**

'ಅಡವಿ'[೪೫](ಸಸ್ಯವಾಚಕ) ಕಾಡು, ಅರಣ್ಯ ಎಂಬ ಅರ್ಥ ಕೊಡುವುದರಿಂದ ಸಸ್ಯವಾಚಿಯಿಂದ ಈ ನಾಮ ಬಂದಿರಬಹುದು.

'ಅಮರ'[೪೬](ಧಾರ್ಮಿಕ ಭಾವವಾಚಿ), (ಅಮರ– ಡಿ.ಇಡಿ. ೧೯೩೪) ಇನಾಮಾಗಿ ಕೊಟ್ಟಗ್ರಾಮ(ಸಂ.ಕ.ನಿ) ಉದಾಹರಣೆಗೆ: 'ಅಮರದೇವರ ಗುಡ್ಡ' ಈ ರೀತಿಯಾಗಿ ಬಂದಿರಬಹುದು.

**ಅಮ್ಮನಕೆರೆ**

'ಅಮ್ಮ'[೪೭](ವ್ಯಕ್ತಿಯಾ ದೇವತ ಸಂಬಂಧಿವಾಚಕ) (ಇ.ಇಡಿ. ನಂ. ೧೫೪) ಗ್ರಾಮದೇವತೆ ಎಂಬ ಉಲ್ಲೇಖ ನೀಡುತ್ತದೆ. ಉದಾಹರಣೆ: ಅಮ್ಮನಕೆರೆ

**ಕುಪ್ಪಿನಕೆರೆ**

ಕುಪ್ಪಿ[೪೮] ಕುಪ್ಪ ಕುಪ್ಪೆ ಎಂಬುದರ ಇನ್ನೊಂದು ರೂಪ– ಚಿಕ್ಕಗುಡ್ಡ ದಿಬ್ಬ ಎಂಬುದಾಗಿದೆ(ಡಿ.ಇಡಿ. ೧೪೪೦, ಶಿಲಾವಾಚಕ). ಉದಾಹರಣೆ: ಕುಪ್ಪಿನಕೆರೆ ಎಂಬುದಾಗಿರಬೇಕು.

**ಗುಂಡಿನಹೊಳೆ**

ಗಂಡು– ಬಂಡೆ, ಗುಂಡುಕಲ್ಲು, ಗುಂಪು, ದುಂಡಾದ ಅರ್ಥ ನೀಡುತ್ತವೆ.

ಉದಾಹರಣೆ: ಗುಂಡಿನ ಹೊಳೆ, ಗುಂಡುಮುಳುಗ

**ಕೂಡ್ಲಿಗಿ**

ಕುರುವ[೪೯](ಜಲಸಂಬಂಧಿ)

ಉದಾಹರಣೆ: ಕುದುರು ಕೂಡಲ್, ನೀರಿನ ಹರಿವುಗಳು ಕೂಡುವ ಸ್ಥಳ

ಸ್ಥಳ: ಜಂಗಮ(ಜಲವಾಚ) ಕೂಡ್+ಆಲ್=ಕೂಡಲ್

ಸಂಸ್ಕೃತ: ಜಲಸಂಗಮ, ಇತರೆ ರೂಪಗಳು– ಕೂಡ್ಲು, ಕೂಡ್ಲಿ, ಕೂಡ್ಲ

ಉದಾಹರಣೆ: ಕೂಡ್ಲೂರು, ಕೂಡ್ಲಿಗಿ ಆಗಿರಬಹುದು.

**ಕೆರೆಕಾವಲರಹಟ್ಟಿ**

ಕೆರೆ[೫೦] ಬೇಸಾಯಕ್ಕೆ ನೀರು ನಿಲ್ಲಿಸುವ ತಗ್ಗು ಪ್ರದೇಶ(ವಿವರಕ್ಕೆ ಡಿ.ಇಡಿ., ೧೬೪೮)

ಉದಾಹರಣೆ: ಚಿಕ್ಕಕೆರೆಯಾಗಿನಹಳ್ಳಿ, ಕೆರೆಕಾವಲರಹಟ್ಟಿ ಇದು.

ಹಟ್ಟಿಯಲ್ಲಿಯೂ ಪ್ರಯೋಗ ಆಗುವುದುಂಟು(ಧ್ವನಿಪ್ರತ್ಯಯ)

**ನಾಗಲಾಪುರ**

ನಾಗ[೫೧] ಒಂದು ಜಾತಿಯ ಹಾವು(ಪ್ರಾಣಿವಾಚಕ ಹಾಗೂ ವ್ಯಕ್ತಿವಾಚಕ)

ಸ್ತ್ರೀ–ಪುರುಷ, ಉದಾಹರಣೆ: ನಾಗಲಾಪುರ, ನಾಗೇನಹಳ್ಳಿ

**ಬಂಡೆಬಸಾಪುರ**

ಬಂಡಿ[೫೨] ಬಂಡಿ, ಬಂಡೆ(ಶಿಲಾವಾಚಕ) ಬಂಡೆ ದೊಡ್ಡಕಲ್ಲು ಶಿಲೆ

ಉದಾಹರಣೆ: ಬಂಡೆಬಸಾಪುರ

**ಹನಸಿ**

ಹನ್ಸಿ[೫೩] ಹನಸಿ, ಹನಸು=ಹೇಳಿಕೆ ವೇದೋಕ್ತಿ

ಉದಾಹರಣೆ: ಹನ್ಸಿ

**ಹಿರೇಹೆಗ್ಗಡೆಹಾಳ್**

ಹಿರೇ[೫೪] ಹಿರಿಯ, ಶ್ರೇಷ್ಠ

ಹೆಗ್ಗಡೆ: ಪೆಗ್ಗಡೆ– ನಾಯಕ ಹೆಗ್ಗಡೆ

ಉದಾಹರಣೆ: ಹೆಗ್ಗಡಾಳ, ಹಿರೇ ಹೆಗ್ಗಡಾಳ

**ಗೋವಿಂದಗಿರಿ(ವ್ಯಕ್ತಿವಾಚಕ)**

ಗೋವಿಂದ: ಹೆಸರು ವ್ಯಕ್ತಿನಾಮ

ಉದಾಹರಣೆ: ಗೋವಿಂದನಗಿರಿ

**ವೀರನದುರ್ಗ**

ವೀರ: ಸೂರ, ಕಲಿ, ಬಲಿಷ್ಠ

ಉದಾಹರಣೆ: ವೀರಾಪುರ, ವಿರುಪಾಪುರ, ವೀರನದುರ್ಗ

ಕೂಡ್ಲಿಗಿ ಸ್ಥಳನಾಮ ಕುರಿತು ಹೀಗೂ ನೋಡಬಹುದು: ದ್ರಾವಿಡ ವರ್ಗದ ಭಾಷಾ ಸಾಹಿತ್ಯದಲ್ಲಿ ಮೊದಲ ಪಂಕ್ತಿ ಪಡೆದಿರುವ ತಮಿಳು ಭಾಷೆ ಮತ್ತು ಸ್ಥಳನಾಮಗಳೊಡನೆ ಇಲ್ಲಿಯ ಸ್ಥಳನಾಮಗಳು ಕಿಂಚಿತ್ ಸಂಬಂಧವನ್ನು ನಿರ್ದೇಶಿಸುತ್ತವೆ.

ಮೈಲಾರ < ಮಯೂರ

ಕೂಡ್ಲಿಗಿ < ಕೂಡಲಗಿ

ಅಣಜಿ < ಅಣಜಿಗೇರಿ

ಮೊದಲಾದ ಸ್ಥಳನಾಮಗಳು ಬಳ್ಳಾರಿ ಜಿಲ್ಲೆಯ ಕನ್ನಡ, ಅಲ್ಪಕಾಲಾವಧಿವರೆಗಾದರೂ ತಮಿಳು ಭಾಷೆಯೊಡನೆ ಸಂಬಂಧ ಪಡೆದಿರಬೇಕೆಂಬುದನ್ನು ತೋರಿಸುತ್ತದೆ.

**ಪುರಾಣ ಮತ್ತು ಐತಿಹ್ಯ**

ಪುರಾಣಗಳು ಮತ್ತು ಐತಿಹ್ಯಗಳು ಜನಪದ ಸಾಹಿತ್ಯದ ಪ್ರಕಾರಗಳು. ಪುರಾಣ ಐತಿಹ್ಯಗಳು ನಡೆದ ಘಟನೆಗಳ ಕಥೆಯನ್ನು ನಿರೂಪಿಸುವುದಾಗಿದೆ. ಪುರಾಣ ಎಂಬುದು 'ಪುರ'ದಿಂದ ಬಂದಿದ್ದು 'ಪುರಾ' ಎಂದರೆ ಹಳೆಯದು ಎಂದು ಅರ್ಥೈಸುತ್ತದೆ. ಐತಿಹ್ಯವು ಕಾಲಮಾನದಲ್ಲಿ ಸ್ವಲ್ಪ ಈಚೆಗೆ ನಡೆದದ್ದನ್ನು ಹೇಳಿದರೆ, ಪುರಾಣವು ಹಳೆಯದಾದ ಬಹು ಹಿಂದಿನ ಪ್ರಾಚೀನದಲ್ಲಿ ನಡೆದದ್ದನ್ನು ಹೇಳುತ್ತದೆ. ಪುರಾಣವು

ಸರ್ವ, ಪ್ರತಿಸರ್ಗ, ಮನ್ವಂತರ ಇತ್ಯಾದಿ ಹೊಣೆಯನ್ನು ಹೊಂದಿರುತ್ತದೆ. ಆದರೆ ಐತಿಹ್ಯ ಒಂದಿಷ್ಟು ವಾಸ್ತವ ಬದುಕಿನೊಂದಿಗೆ ತಳುಕುಹಾಕಿಕೊಂಡಿರುತ್ತದೆ. ಪುರಾಣಗಳು ಸೃಷ್ಟಿಯ ಆದಿಯಿಂದ ಮನುಕುಲದ ಚರಿತ್ರೆಯನ್ನು ಹೇಳುವ ಉದ್ದೇಶ ಹೊಂದಿರುತ್ತದೆ. ಹಾಗೆಯೇ ಪುರಾಣಗಳಲ್ಲಿ ಅಖಂಡವೃಷ್ಠಿ, ಮನುಷ್ಯನ ಲೌಕಿಕ, ಆಧ್ಯಾತ್ಮಿಕ ಸ್ಥಿತಿಗಳನ್ನು ತರಲು ಪ್ರಯತ್ನಿಸುತ್ತವೆ. ಅಲ್ಲದೆ ಐತಿಹ್ಯಕ್ಕಿಂತ ಹೆಚ್ಚು ಗಂಭೀರ ಮತ್ತು ಪವಿತ್ರತೆಯನ್ನು ಕಾಪಾಡಿಕೊಳ್ಳುವುದು ಮುಖ್ಯವಾಗಿರುತ್ತದೆ.[೫೫]

ಇನ್ನು ಐತಿಹ್ಯ ಕುರಿತು ಜಾನಪದ ತಜ್ಞರು ಮತ್ತು ವಿದ್ವಾಂಸರು ನಿಘಂಟುಕಾರರು ಅರ್ಥೈಸಿರುವುದನ್ನು ಗಮನಿಸಿದಾಗ Legend ಪದಕ್ಕೆ ಸಂವಾದಿಪದ ಐತಿಹ್ಯ ಎಂಬ ಪದ ಇತಿಹಾಸದ 'ಇತಿ' ಇತಿಹ ಎನ್ನುವ ಸಂಸ್ಕೃತ ರೂಪದಿಂದ ಬಂದಿರುತ್ತದೆ. ಇತಿ, ಇತಿಹ ಎಂಬ ಪದಗಳಿಗೆ ಹೀಗೆ 'ಹೀಗೆಯೇ' ಹೀಗಿತ್ತು, ಹೀಗೆ ನಡೆದದ್ದು ಎಂಬ ಅರ್ಥಗಳು ಇವೆ. ಐತಿಹ್ಯ ಸಹ ಹೀಗೆ ನಡೆದಿರುವ ಸಂಗತಿ ಎಂಬ ಅನ್ವರ್ಥದಲ್ಲಿ ಐತಿಹ್ಯ ಪದರೂಪ ಪಡೆದಿದೆ.

ಐತಿಹ್ಯ ಎಂದರೆ ಪರಂಪರೆಯಿಂದ ಬಂದಿರುವುದು. ಪುರಾಣ, ಚರಿತ್ರೆ, ಪ್ರಮಾಣವಿಲ್ಲದೆ ಪಾರಂಪರೆಯಿಂದ ಒಂದು ಮಾತು ಹೇಳುವುದು. ಐತಿಹ್ಯ, ಪುರಾಣ, ಚರಿತ್ರೆ, ಪ್ರಮಾಣವಿಲ್ಲದೆ ಬಂದದ್ದು. "ಐತಿಹ್ಯಂ ಇತಿಹಾಸವೆನಿಸುಗುಂ" ಎಂಬ ಕನ್ನಡ ಸಾಹಿತ್ಯ ಪರಿಷತ್ ನಿಘಂಟಿನ ಹೇಳಿಕೆಯನ್ನು ಗಮನಿಸಬಹುದಾಗಿದೆ. ಕಿಟ್ಟೆಲ್ ನಿಘಂಟುವಿನಲ್ಲಿ 'ಐತಿಹ್ಯ'ವು 'ಇತಿಹ'ದಿಂದ ಬಂದಿತೆಂದು ಹೇಳಿ ಅದಕ್ಕೆ Oral traditional a legal, a late ಎಂಬ ಅರ್ಥ ಕೊಡಲಾಗಿದೆ. ಕುಡಿಯುವ ನೀರಿನ ಬಾವಿ ಇಲ್ಲದ ಊರು ಇಲ್ಲದಿರಲು ಸಾಧ್ಯವಿಲ್ಲ ಎಂದು ಜೀ.ಶಂ.ಪ. ಅವರು ಹೇಳಿರುವುದು ಸತ್ಯಸಂಗತಿಯಾಗಿದೆ.[೫೬]

ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜು ಅವರು ಸಂಪಾದಿಸಿರುವ ಹಂಪಿ ಜಾನಪದ ಗ್ರಂಥದಲ್ಲಿ ಐತಿಹ್ಯ ಮೂರು ರೀತಿಯಿಂದ ವಿಭಜಿಸಿ ಅಧ್ಯಯನ ಕೈಗೊಂಡಿದ್ದಾರೆ. ಅವೆಂದರೆ:

೧. ವ್ಯಕ್ತಿಪ್ರಧಾನ ಐತಿಹ್ಯಗಳು

೨. ಸ್ಥಳಪ್ರಧಾನ ಐತಿಹ್ಯಗಳು

೩. ಘಟನಪ್ರಧಾನ ಐತಿಹ್ಯಗಳು

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕೂಡ್ಲಿಗಿ ಹೋಬಳಿ ಪರಿಸರ ಐತಿಹ್ಯಗಳು ವ್ಯಕ್ತಿಪ್ರಧಾನ ಐತಿಹ್ಯ, ಸ್ಥಳಪ್ರಧಾನ ಐತಿಹ್ಯ, ಘಟನಾಪ್ರಧಾನ ಐತಿಹ್ಯಗಳಿಂದ ಬಂದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಂತವುಗಳಲ್ಲಿ ಕೆಲವೊಂದನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

**ಅಮರದೇವರಗುಡ್ಡ**

ಈಗ ಕೂಡ್ಲಿಗಿ ಪಟ್ಟಣದ ಒಂದನೇ ವಾರ್ಡ್ ಆಗಿ ಪರಿವರ್ತನೆಗೊಂಡಿದ್ದು ಹಿಂದೆ ಒಂದು ಗ್ರಾಮವಾಗಿರುವ ಪೂರ್ವದಲ್ಲಿ ಗುಡ್ಡದ ಮೇಲೆ ಕೆಲವಾರು ಜನ ವಸತಿ ನಿರ್ಮಿಸಿಕೊಂಡು ಅದಕ್ಕೆ ರಕ್ಷಣೆಯಾಗಿ ಕೋಟೆಯ ನಿರ್ಮಾಣ ಮಾಡಲಾಗಿತ್ತು. ಈ ಗುಡ್ಡಕ್ಕೆ ಒಂದು ಕಿ.ಮೀ. ದೂರದಲ್ಲಿ ಗುಂಡಿನ ಹೊಳೆ ಎಂಬ ಊರೊಂದಿತ್ತು. ಆ ಊರಿಗೆ ಬ್ರಹ್ಮರಾಕ್ಷಸನ ಕಾಟವಿತ್ತು. ಆ ರಕ್ಕಸಕ್ಕೆ ಹೆದರಿ ಜನ ಪಶ್ಚಿಮಕ್ಕೆ ಗುಡ್ಡದ ಬಲಭಾಗಕ್ಕೆ ಬಂದು ನೆಲೆಸಿದರು. ಹಾಗೆ ಗುಡ್ಡದ ಮೇಲಿದ್ದ ಜನ ಕಾಲರ, ಪ್ಲೇಗ್, ಮಹಾಮಾರಿಯಿಂದ ಗುಡ್ಡದ ಬುಡದಲ್ಲಿ

ಬಂದು ನೆಲೆಸಿದರು. ಗುಡ್ಡದಿಂದ ಬಂದವರು ಗುಡ್ಡದವರಾದರೆ ಗುಂಡಿನಹೊಳೆಯ ಗುನ್ನಳ್ಳಿಯಿಂದ ಬಂದವರು. ಗುನ್ನಳ್ಳಿಯವರಾದರು ಒಟ್ಟಾಗಿ ಗುಡ್ಡಗುನ್ನಳ್ಳಿಯಾಗಿ ಮಾರ್ಪಟ್ಟಿತು. ಇನ್ನೊಂದು ಐತಿಹ್ಯ ಪ್ರಕಾರ ಅಮರೇಶ್ವರ ದೇವಾಲಯಕ್ಕೆ ಹಿಂದೆ ಪ್ರಾತಃ ಕಾಲದಲ್ಲಿ ಅಮರಗಣಗಳು ಬಂದು ನೆಲೆಸಿ ಅಮರೇಶ್ವರರನ್ನು ಪೂಜಿಸಿ, ಧ್ಯಾನಿಸುತ್ತಿದ್ದರಿಂದ ಈ ಊರಿಗೆ ಅಮರದೇವರ ಗುಡ್ಡ ಎಂದು ಹೆಸರು ಬಂದಿದೆ ಎನ್ನುತ್ತಾರೆ ಕೆಲವರು.[೩೭]

**ಅಮ್ಮನಕೆರೆ**

ಕೂಡ್ಲಿಗಿಯಿಂದ ೫ ಕಿ.ಮೀ. ದೂರದಲ್ಲಿದ್ದು ಈ ಗ್ರಾಮದ ಬಗ್ಗೆ ಒಂದು ಐತಿಹ್ಯವಿದೆ. ಬಹು ಹಿಂದೆ ಇಲ್ಲಿ ಹಲವು ದೇವಾಲಯಗಳನ್ನು ಜನರು ನಿರ್ಮಿಸಿದರು. ಆದರೆ ಅಮ್ಮನ ಊರು ಉದ್ಧಾರಕ್ಕೆ ಒಂದು ಜಲಮೂಲ ಇಲ್ಲದ ಕಾರಣ ತಾಯಿ(ಅಮ್ಮ) ಪೂಜಾರಿಯ ಕನಸಿನಲ್ಲಿ ಬಂದು ಒಂದು ಕೆರೆ ಕಟ್ಟಿಸಿದರೆ ಊರು ಉದ್ಧಾರವಾಗುವುದು ಎಂದಾಗ ಕೆರೆಯೊಂದನ್ನು ಕಟ್ಟಿಸಿದರಂತೆ. ಅಮ್ಮನ ಅಭಿಲಾಷೆಯಿಂದ ಕಟ್ಟಿಸಿದ ಕೆರೆಯಿಂದ ಈ ಗ್ರಾಮಕ್ಕೆ ಅಮ್ಮನಕೆರೆ ಎಂಬ ಹೆಸರು ಬಂತು.[೩೮]

ಈ ಅಮ್ಮನಕೆರೆ ಗ್ರಾಮ ಪಾಳೇಗಾರರಾದ ಜರ್ಮಲಿಯ ಬೊಮ್ಮಂತರಾಜ ತನ್ನ ಆಳ್ವಿಕೆಯಲ್ಲಿ ಇಟ್ಟುಕೊಂಡಿದ್ದ ಎಂಬುದು ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿತು ಮತ್ತು ಇಲ್ಲಿನ ಹತ್ತಿರ ಗ್ರಾಮಗಳಾದ ಕಕ್ಕುಪ್ಪಿ ವಿರುಪಾಪುರದ ಮೇಲೆ ಚಿತ್ರದುರ್ಗದ ಪಾಳೇಗಾರರು ದಂಡೆತ್ತಿಬರುತ್ತಿದ್ದರು ಎಂದು ಸಹ ತಿಳಿಯುತ್ತದೆ.

**ಗುಡೇಕೋಟೆ**

ಸುತ್ತಲೂ ಗುಡ್ಡಗಳು ಇರುವುದರಿಂದ, ಗುಡ್ಡದ ಮೇಲೆ ಕೋಟೆ ಇರುವುದರಿಂದ ಸ್ಥಳೀಯರು ಗುಂಡುಕೋಟೆ, ಗುಡೇಕೋಟೆ ಎಂದಾಯಿತು. ಈ ಹಿಂದೆ ಇದು 'ಬಾಣಸುರ'ನ ನೆಲೆಯಾಗಿದ್ದು, ಬಾಣವರ ಅಥವಾ ಬಾಣಾಪುರ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು.[೩೯]

**ಗುಣಸಾಗರ**

ಐತಿಹ್ಯ ಇಂತಿದೆ ಈ ಹಿಂದೆ ಮಹಾಭಾರತ ಕಾಲದಲ್ಲಿ ಇದಕ್ಕೆ 'ಏಕಚಕ್ರ' ನಗರ ಎಂಬ ಹೆಸರಿತ್ತು. ಮತಿವಂತಿ ಮತ್ತು ಗುಣವಂತಿ ಸಹೋದರಿಯರಲ್ಲಿ ಗುಣವತಿ ಕೆರೆಕಟ್ಟಿಸಿದ್ದರಿಂದ 'ಗುಣಸಾಗರ' ಎಂಬುದಾಗಿ ಹೆಸರಾಯಿತು. ಮುಂದೆ ಅದೇ ಹೆಸರಿನಲ್ಲಿ ಗ್ರಾಮಕ್ಕೂ ಅನ್ವಯವಾಯಿತು ಎನ್ನಲಾಗುತ್ತದೆ(ಇದು ಕೂಡ್ಲಿಗಿ ಹೋಬಳಿ ಪರಿಸರಕ್ಕೆ ಹೊಂದಿಕೊಂಡಿದೆ, ಕೂಡ್ಲಿಗಿ ತಾಲ್ಲೂಕಿನಲ್ಲಿ ವಿಶೇಷ ಸ್ಥಾನ ಪಡೆದಿದೆ).[೪೦]

**ಬಡೇಲಡಕು**

ಕೂಡ್ಲಿಗಿಯಿಂದ ೪ ಕಿ.ಮೀ. ದೂರದಲ್ಲಿರುವ ಗ್ರಾಮ. ಇದರ ಸಮೀಪ ಗ್ರಾಮ ವೀರನದುರ್ಗ. ಒಮ್ಮೆ ಟಿಪ್ಪುಸುಲ್ತಾನ ಮುತ್ತಿಗೆ ಹಾಕಿದ್ದನಂತೆ, ಅವನೊಂದಿಗೆ ವೀರಾವೇಶದಿಂದ ಹೋರಾಡಿದ ಹಳ್ಳಿಯ ವೀರನೊಬ್ಬನ ಪರಾಕ್ರಮವನ್ನು ಮೆಚ್ಚಿದ ಟಿಪ್ಪುಸುಲ್ತಾನ. ಬಡೇಲಡಾಕ(ಬಡೇಲಡಾಯೀ ಲಡನೇವಾಲಾ) ಎಂಬ ಪ್ರಶಂಸೆ ವ್ಯಕ್ತಪಡಿಸಿದರಿಂದಾಗಿ ಈ ಊರಿಗೆ ಬಡೇಲಡಕು ಎಂಬ ಹೆಸರು ಬಂತು ಎಂದುದು ಐತಿಹ್ಯವಿದೆ.[೪೧]

ಇನ್ನೊಂದು ಐತಿಹ್ಯ ಪ್ರಕಾರ ಪಾಳೇಗಾರರ ಆಳ್ವಿಕೆಯ ಕಾಲದಲ್ಲಿ ಈ ಊರು ಸ್ಥಾಪಿಸಲ್ಪಟ್ಟಿತು ಎಂಬ ಇತಿಹಾಸವಿದೆ. ಕಂಪ್ಲಿ ಕೋಟೆಯನ್ನು ಆಳುವ ಕಂಪಿಲರಾಯನ ಮಗನಾದ ರಣಸಿಂಗನ ಕುಮಾರರಾಮನ ವಂಶಸ್ಥರು– ಕಾರಣಾಂತರದಿಂದ ಕಂಪಿಲದುರ್ಗ ತೊರೆದು ಬಡೇಲಡಕು ಗ್ರಾಮಕ್ಕೆ ಪೂರ್ವದಿಕ್ಕಿನಲ್ಲಿ

ಮಾಳಚಿಂತೆ(ಗ್ರಾಮ)ಯ ಪಕ್ಕದಲ್ಲಿ ತಮ್ಮ ಆರಾಧ್ಯ ದೈವವಾದ ಶೂಲರಾಮ ದೇವಾಲಯ ನಿರ್ಮಿಸಿ ಅಲ್ಲಿ ವಾಸವಾಗಿದ್ದರು ಎಂದು ತಿಳಿಯುತ್ತದೆ. ಕಾಲಕ್ರಮೇಣ ಬಡೇಲಡು ವೀರನದುರ್ಗಕ್ಕೆ ಒಳಪಟ್ಟಿತ್ತು. ಒಮ್ಮೆ ಯುದ್ಧ ಕಾಲದಲ್ಲಿ ಇಲ್ಲಿನ ವೀರಬಾಲಕನ ಸಾಹಸದಿಂದ ಹೋರಾಡಿದ್ದಕ್ಕೆ ಬಡೇಲಡಕ ಎಂದು ಕೊಂಡಾಡಿದ ಕಾರಣ ಅಂದಿನಿಂದ ಈ ಗ್ರಾಮ ಬಡೇಲಡಕು ಎಂದು ಕರೆಯಲ್ಪಟ್ಟಿತು.

**ಶಿವಪುರ**

ಕೂಡ್ಲಿಗಿಗೆ ೭ ಕಿ.ಮೀ. ದೂರದಲ್ಲಿರುವ ಗ್ರಾಮ. ಶಿವಪುರ ಈ ಮೊದಲು ಪಕ್ಕದ ಬೆಳ್ನಾಡು ಸ್ಥಳದಲ್ಲಿ ವಾಸವಿದ್ದು, ಹರಪನಹಳ್ಳಿಯ ಪಾಳೇಗಾರ ಸೋಮಶೇಖರನ ಆಡಳಿತಕ್ಕೆ ಒಳಪಟ್ಟ ಮುಖ್ಯ ಕೇಂದ್ರವಾಗಿದ್ದ ನಾರಾಯಣಪುರ(ನಾರಾಯಣ ದೇವರಕೆರೆ)ಕ್ಕೆ ಬರುವಾಗ ಬೆಳ್ನಾಡಿಗೆ ಭೇಟಿ ನೀಡುತ್ತಿದ್ದರಂತೆ. ಅಲ್ಲಿಯ ವೀರಶೈವ ಸ್ವಾಮಿಯಾದ ಮಲ್ಲಿಪುರದ ಮರುಳಯ್ಯ ಸ್ವಾಮಿಗಳಿಗೆ ಈ ಗ್ರಾಮವನ್ನು ಶಿವನ ಹೆಸರಿನಲ್ಲಿ ದತ್ತಿ ಬಿಟ್ಟಿರುವುದರಿಂದ ಈ ಹೆಸರು ಬಂದಿರುವುದನ್ನು ಕೆಲವು ಜನ ಹಿರಿಯರು ತಿಳಿಸುತ್ತಾರೆ. ಇನ್ನೊಂದು ಮೂಲ ಪ್ರಕಾರ ೧೨ನೇ ಶತಮಾನದಲ್ಲಿ ಹೆಚ್ಚಾಗಿ ಶಿವಶರಣರು ಈ ಪ್ರದೇಶದಲ್ಲಿ ವಾಸಿಸುತ್ತಿದ್ದರಿಂದ ಶಿವಪುರ ಎಂಬುದಾಗಿ ನಾಮರೂಢಿಯಾಗಿ ಬಂದಿರಬಹುದಾದ ಸಾಧ್ಯತೆ ಇದೆ ಎನ್ನುತ್ತಾರೆ.[೨]

**ಹನಸಿ**

ಕೂಡ್ಲಿಗಿ ಕೇಂದ್ರದಿಂದ ೭ ಕಿ.ಮೀ. ದೂರದಲ್ಲಿ ಇರುವ ಗ್ರಾಮ ಹಿಂದೆ ಕೋಗಳಿನಾಡಿನ ೫೦೦ ಗ್ರಾಮಕ್ಕೆ ಸೇರಿದ್ದು, ಹನಸಿ-೧೨ ಎಂದು ಗುರ್ತಿಸಿಕೊಂಡಿದೆ. ಹಿಂದೆ ಕೂಡ್ಲಿಗಿ ಹೋಬಳಿಯಲಿದ್ದ ಪ್ರದೇಶ. ಈ ಊರಿನ ಪ್ರಾಚೀನ ಹೆಸರು ನಾಗರಕಟ್ಟೆ ಈ ಊರಿನ ಕೆರೆಏರಿ ನಾಗರಹಾವಿನಂತೆ ತಿರುವು-ಮುರುವುಗಳಿಂದ ಕೂಡಿದ್ದು, ಹಾಗಾಗಿ 'ನಾಗರಕಟ್ಟೆ' ಎಂಬ ಹೆಸರಿತ್ತು. ಕೂಡ್ಲಿಗಿ ತಾಲ್ಲೂಕಿನಲ್ಲಿಯೂ ಅತಿ ದೊಡ್ಡ ಕೆರೆಗಳಲ್ಲಿ ಇದು ಒಂದು ಆಗಿದ್ದರಿಂದ ವರ್ಷಪೂರ್ತಿ ಈ ಕೆರೆ ತುಂಬಿರುತ್ತಿತ್ತು. ಮಾಗಾಣಿಯ ಕೃಷಿ ನಿರಂತರವಾಗಿತ್ತು. ಇಲ್ಲಿ ಬೆಳೆಯುವ ಅಕ್ಕಿ(ಭತ್ತ) ಸಿಹಿಯಾಗಿದ್ದು ಅದರಿಂದ ತಯಾರಿಸಿದ 'ಅನ್ನ' ಸಿಹಿ ಆಗಿರುತ್ತಿತ್ತು. ಹಾಗಾಗಿ ಈ ಊರಿನ ಅನ್ನ ಸಿಹಿ ಸಿಹಿ ಎನ್ನುವ ಮಾತು ರೂಢಿಗತವಾಗಿ ಕಾಲಾಂತರದಲ್ಲಿ ಅದು ಅನ್ನ ಸಿಹಿ, ಅನಸಿ, ಹನಸಿಯಾಗಿರಬೇಕು ಎಂಬುದು ಸ್ಥಳೀಯ ಅಭಿಮತ.

**ಮೊರಬ**

ಕೂಡ್ಲಿಗಿಯಿಂದ ದಕ್ಷಿಣಕ್ಕೆ ೫ ಕಿ.ಮೀ. ದೂರದಲ್ಲಿರುವ ಊರು. ಕೋಗಳಿ ೫೦೦ರ ನಾಡಿನಲ್ಲಿ ಉಲ್ಲೇಖಗೊಂಡ ಕೂಡ್ಲಿಗಿ ಹೋಬಳಿಯ ಹೆಸರಾದ ಗ್ರಾಮ ಇದರ ಐತಿಹ್ಯ ನೋಡಿದರೆ ಹಿಂದೆ ಮುಸ್ಲಿಂ ವ್ಯಾಪಾರಿಯೊಬ್ಬರು ವ್ಯಾಪಾರಕ್ಕೆಂದು ಈ ಊರಿಗೆ ಬರುತ್ತಿದ್ದರು. ಬಂದವನೆ ಇಲ್ಲಿನ ಸ್ಥಳದೈವ ಶ್ರೀ ವೀರಭದ್ರೇಶ್ವರನಿಗೆ ನಮಿಸಿ ಮುಂದೆ ವ್ಯಾಪಾರ ಹೋಗುತ್ತಿದ್ದ, ಒಮ್ಮೆ ಈ ವ್ಯಾಪಾರ ಹಾಗೆ ಮಾಡದೆ ನೇರವಾಗಿ ವ್ಯಾಪಾರ ಮುಗಿಸಿ ವ್ಯಾಪಾರದ ಸರಕು ತುಂಬಿದ್ದ ಕುದುರೆ ಏರಿ ಹೊರಡಲು ಮುಂದಾದಾಗ ಸರಕು ತುಂಬಿದ್ದ ಕುದುರೆ ಕೆನೆಯಲು ಮೇಲಿದ್ದ ವ್ಯಾಪಾರಿ ಮರೇ-ಬಾ, ಮರೇ-ಬಾ ಎಂದು ಚೀರುತ್ತ ಕೆಳಗುರುಳಿದ. ಅಲ್ಲಿದ್ದ ಜನರೆಲ್ಲಾ ಓಡಿಬಂದು ಬಿದ್ದ ಕಾರಣ ವಿಚಾರಿಸಿದಾಗ ನಡೆದ ಸಂಗತಿಯಲ್ಲಿ ಹೇಳಿದ ನಂತರ ತಪ್ಪಿನ ಅರಿವಾಗಿ ವೀರಭದ್ರಸ್ವಾಮಿಗೆ ಹರಕೆ ಮುಟ್ಟಿಸಿದ, ಅಂದಿನಿಂದ ಈ ಗ್ರಾಮ ಮರೇ-ಬಾ ಹೋಗಿ ಮರಬಾ 'ಮೊರಬ' ಆಯಿತತಂತೆ. ಇನ್ನೊಂದು ಸ್ಥಳ ಐತಿಹ್ಯ ಪ್ರಕಾರ ವೀರಭದ್ರೇಶ್ವರ ಸ್ವಾಮಿಯನ್ನು

ಪೂಜಿಸುತ್ತಿದ್ದ ಸಾದುಭಕ್ತನೊಬ್ಬ ಊರ ಸಂಚಾರಕ್ಕಾಗಿ ಹೋಗಿ ಅಲ್ಲಿಯೇ ನೆಲೆನಿಂತಾಗ ವೀರಭದ್ರೇಶ್ವರನ ಪೂಜೆ ನಿಂತು ಹೋಗಿ ಆಗಸ್ವಯಂ ವೀರಭದ್ರಗೆ ಆ ಸಾದುವಿನ ಕನಸ್ಸಿನಲ್ಲಿ ಹೋಗಿ ಮರಳಿ–ಬಾ ಎಂದು ಪದೇ ಸ್ವಪ್ನವಾಗಲು ಈ ವಿಷಯ ತಿಳಿದ ಸಾಧು ಮರಳಿ–ಬಾ ವಿಷಯ ಗ್ರಾಮಸ್ಥರಿಗೆ ತಿಳಿಪಡಿಸಿದ. ಈ ಕಾರಣದಿಂದ ಮರಳಿ–ಬಾ ಮರಬಿ ಆಗಿದೆ ಎನ್ನಲಾಗುತ್ತದೆ.

**ಟಿಪ್ಪಣಿಗಳು**

೧. ಎ. ವೃಷಬೇಂದ್ರಾಚಾರ್ ಮತ್ತು ರವಿಕುಮಾರ್ ಎನ್.ಎಂ., ಮುನ್ನಡೆಯ ಕೂಡ್ಲಿಗಿ, ಪುಟ. ೧

೨. ಅದೇ, ಪುಟ ೧

೩. www.onefivenine.com.kudligitaluk

೪. ಅರವಿಂದ ಮಾಲಗತ್ತಿ, ಕನ್ನಡ ವಿಷಯ ವಿಶ್ವಕೋಶ ಕರ್ನಾಟಕ, ಪುಟ ೫೭೨

೫. ವಾಸುದೇವ ಬಡಿಗೇರ್, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪುಟ ೧–೨. ಅದೇ., ಪು. ೨

೬. www.onefivenine.com ಪೂರ್ವೋಕ್ತ

೭. ಕೂಡ್ಲಿಗಿ ಹೋಬಳಿ, Village Accountant ಗಳ ಮಾಹಿತಿ ಆಧರಿಸಿ

೮. www.onefive ಪೂರ್ವೋಕ್ತ

೯. Kudligi Taluk Profile, 2001-2011.

೧೦. ಸಿ. ಮಹಾದೇವ, ಬಳ್ಳಾರಿ ಜಿಲ್ಲೆಯ ಮರದವಾಸ್ತು, ಪುಟ ೯

೧೧. ವೃಷಬೇಂದ್ರಾಚಾರ್, ಮುನ್ನಡೆಯ ಕೂಡ್ಲಿಗಿ, ಪುಟ. ೨

೧೨. ಜಿ. ವೆಂಕಟ ಸುಬ್ಬಯ್ಯ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಪುಟ ೨೦೯

೧೩. ಅದೇ, ಪುಟ ೨೦೯

೧೪. ಅದೇ, ಪುಟ ೨೦೯

೧೫. ಅದೇ, ಪುಟ ೨೦೯

೧೬. ಅದೇ, ಪುಟ ೨೦೯

೧೭. ಅದೇ, ಪುಟ ೨೧೦

೧೮. ಎ. ವೃಷಬೇಂದ್ರಾಚಾರ್ ಪೂರ್ವೋಕ್ತ, ಪುಟ. ೯

೧೯. ಎಂ. ಕೊಟ್ರೇಶ್, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪುಟ ೩೯

೨೦. ಅದೇ, ಪುಟ ೪೪–೪೫

೨೧. ಎಲ್. ಶ್ರೀನಿವಾಸ, ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪುಟ ೫೧

೨೨. ಅದೇ, ಪುಟ ೫೩

೨೩. ಅದೇ, ಪುಟ ೪೭

೨೪. ಅದೇ, ಪುಟ ೬೦

೨೫. ಹೆಚ್. ತಿಪ್ಪೇಸ್ವಾಮಿ, ಇತಿಹಾಸ ದರ್ಶನ, ಸಂಪುಟ ೧೬, ಪುಟ ೨

೨೬. ಎಲ್. ಶ್ರೀನಿವಾಸ, ಪೂರ್ವೋಕ್ತ, ಪುಟ ೫೯

೨೭. ಅದೇ, ಪುಟ ೫೨

೨೮. ಅದೇ, ಪುಟ ೫೯

೨೯. ಅದೇ, ಪುಟ ೪೮

೩೦. ಎ. ವೃಷಬೇಂದ್ರಾಚಾರ್ ಪೂರ್ವೋಕ್ತ, ಪುಟ. ೯

೩೧. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಪುಟ ೮

೩೨. ಎ. ವೃಷಬೇಂದ್ರಾಚಾರ್, ಪೂರ್ವೋಕ್ತ, ಪುಟ. ೯

೩೩. ವಾಸುದೇವ ಬಡಿಗೇರ್, ಕಾರ್ತಿಕೇಯ ತಪೋವನ, ಪುಟ ೯–೧೦

೩೪. ಎ. ವೃಷಬೇಂದ್ರಾಚಾರ್, ಪೂರ್ವೋಕ್ತ, ಪುಟ. ೧೦

೩೫. ಅದೇ, ಪುಟ ೧೦

೩೬. ಅದೇ, ಪುಟ ೧೦

೩೭. ಅದೇ, ಪುಟ ೧೨

೩೮. ಅದೇ, ಪುಟ ೧೨

೩೯. ಎಚ್.ಎಂ. ಬಸವರಾಜ, ಗುಡೇಕೋಟೆ: ಒಂದು ಚಾರಿತ್ರಿಕ ಅಧ್ಯಯನ, ಪುಟ ೨೬

೪೦. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೇಯಗಾರರು, ಪುಟ ೨೧

೪೧. ಅದೇ, ಪುಟ ೩೫

೪೨. ಅದೇ, ಪುಟ ೩೬

೪೩. ಅದೇ, ಪುಟ ೩೭

೪೪. ಕಾಂತರಾಜ್ ಐಮಂಗಲ ಹೋಬಳಿ ಪರಿಸರ: ಸಾಂಸ್ಕೃತಿಕ ಅಧ್ಯಯನ, ಪುಟ ೩೩

೪೫. ವೀರೇಶ್, ಬಳ್ಳಾರಿ ತಾಲ್ಲೂಕಿನ ಸ್ಥಳನಾಮಗಳು, ಪುಟ ೧೦೭

೪೬. ಅದೇ, ಪುಟ ೧೦೮

೪೭. ಅದೇ, ಪುಟ ೧೦೮

೪೮. ಅದೇ, ಪುಟ ೧೧೬

೪೯. ಅದೇ, ಪುಟ ೧೧೬

೫೦. ಅದೇ, ಪುಟ ೧೨೭

೫೧. ಅದೇ, ಪುಟ ೧೩೦

೫೨. ಅದೇ, ಪುಟ ೧೩೬

೫೩. ಅದೇ, ಪುಟ ೧೩೭

೫೪. ಎ. ಕರಿಬಸಪ್ಪ, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಪುಟ ೨೦

೫೫. ಅದೇ, ಪುಟ ೧೦

೫೬. ಅದೇ, ಪುಟ ೮೨

೫೭. ಅದೇ, ಪುಟ ೮೩

೫೮. ಅದೇ, ಪುಟ ೯೬

೫೯. ಅದೇ, ಪುಟ ೯೬

೬೦. ಅದೇ, ಪುಟ ೧೦೭

೬೧. ಅದೇ, ಪುಟ ೧೧೯

೬೨. Government of Karnataka Rural Development and Panchayat Raj Department(Badaladaku and Shivapura)

# ಅಧ್ಯಾಯ ೩

# ವಾಸ್ತು ಮತ್ತು ಮೂರ್ತಿಶಿಲ್ಪ

ವಾಸ್ತು ಕುರಿತಾದ ಅಂಶಗಳನ್ನು ಗಮನಿಸುವಾಗ ಈ ತರಹದ ಅಂಶಗಳು ಅತಿ ಪ್ರಮುಖ ಎನಿಸುತ್ತವೆ.

ಅಮರ್ತ್ಯಾಶೈವ ಮರ್ತ್ಯಾಶೈವ ಯತ್ರ ಯತ್ರ
ವಸಂತಿ ಹಿ
ತದ್ವಕ್ತಿ ಮತಂ...

ಮಯಮತದ ಪ್ರಕಾರ ಮತ್ರ್ಯ, ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ವಸ್ತು ಎಂಬಲ್ಲಿ ಕೇವಲ ಭೂಮಿ ಅಥವಾ ಜಾಗಮಾತ್ರ. ಆದರೆ ವಾಸಿಸುವ ಜಾಗವನ್ನು ಆಶ್ರಯಿಸಿದ್ದು ವಾಸ್ತು. ವಾಸ್ತು ಪದ ವ್ಯುತ್ಪತ್ತಿಯನ್ನು ಗುರುತಿಸುವಾಗ ವಸಂತಿ ಪ್ರಾಣಿನೋಽತೇತಿ ವಾಸ್ತು ಶಬ್ದ ವ್ಯುತ್ಪತ್ತಿ ಎಂದು ಸಂಗ್ರಾಹ್ಯವಾಗಿ ಗುರುತಿಸುತ್ತಾರೆ. ವಾಸ್ತು ಎಂದಲ್ಲಿ ಭೂಮಿಯ ಮೇಲೆ ನಿಂತ ಕಟ್ಟಡ ರಚನೆಗಳು ಎಂದು ಸ್ಪಷ್ಟವಾಗುತ್ತದೆ.

ಸೂರು ಎನ್ನುವುದು ಮಾನವನ ಮೂಲಭೂತ ಅವಶ್ಯಕತೆಗಳಲ್ಲೊಂದು ಆದಿಮಾ ಕಾಲದಿಂದ ಇವನು ವಾಸಿಸುವ ಸ್ಥಳ ಹೆಬ್ಬಂಡೆಯಿಂದ ಗುಹೆ ಕಡೆಗೆ ನಂತರ ಮನೆಯ ಕಡೆಗೆ ರೂಪಾಂತರ ಹೊಂದಿ ಕಟ್ಟಡದ ನಿರ್ಮಾಣ ಮೂಡಿತು. 'ನಿವಾಸಾತ್ ಸರ್ವಭೂತಾನಾಂ ವಾಸ್ತುರಿತಿ ಶಬ್ದಿತ' ಇದು ಅಮರಕೋಶದಲ್ಲಿರುವ ವ್ಯಾಖ್ಯೆ. ಹೀಗೆ ಉಲ್ಲೇಖಿಸುತ್ತದೆ.[೧] ಇನ್ನು ಮನುಷ್ಯ ತನಗಾಗಿ ಕಟ್ಟಿಕೊಂಡ ಮನೆ ಗೃಹವಾಸ್ತು ಎನಿಸಿದರೆ ತನ್ನ ದೇವರಿಗಾಗಿ ಕಟ್ಟಿದ್ದು ಧಾರ್ಮಿಕ, ವಾಸ್ತುಶಿಲ್ಪ ಅಥವಾ ದೇವಾಲಯ ವಾಸ್ತುಶಿಲ್ಪ ಎನಿಸಿತು. ಅದರಲ್ಲಿ ಮುಖ್ಯವಾಗಿ ದೇವಾಲಯ, ಅರಮನೆ ಅಥವಾ ರಾಜಗೃಹ ರಚನೆ, ದೇವತಾಮೂರ್ತಿಗಳ ರಚನೆ, ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ ಮುಂತಾದವುಗಳನ್ನು ಶುಕ್ರನೀತಿ ಗ್ರಂಥವು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ.[೨]

## ದೇವಾಲಯ

ಮಾನವನ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ದೇವಾಲಯಗಳ ನಿರ್ಮಾಣ, ಮೂರ್ತಿಶಿಲ್ಪಗಳ ಪ್ರತಿಷ್ಠಾಪನೆ, ನಿರಂತರವಾಗಿ ನಡೆದುಬಂದಿದೆ. ದೇವಾಲಯ ಎಂದರೆ ದೇವರಿಗಾಗಿ ನಿರ್ಮಿಸಿದ ಆಲಯವೇ ಆಗಿದೆ. ಮಾನವನು ಮನೆಯನ್ನು ನಿರ್ಮಿಸಿಕೊಂಡು ಹೇಗೆ ಜೀವನ ನಿರ್ವಹಿಸುವನೋ ಹಾಗೆಯೇ ದೇವರಿಗೂ ಆಲಯವನ್ನು ನಿರ್ಮಿಸಬೇಕು ಎನ್ನುವ ಉದ್ದೇಶದಿಂದ ದೇವಾಲಯವನ್ನು ನಿರ್ಮಿಸಲು ಪ್ರಾರಂಭಿಸಿರಬೇಕು. ಮಾನವನ ದೈವ, ಇಹಪರ, ವಾಸ್ತವಿಕ ಆದರ್ಶ ಇವುಗಳ ಮಿಲನದ ಸಂಕೇತವೇ ದೇವಾಲಯ. ಜಗತ್ತಿನ

ಸೃಷ್ಟಿಕರ್ತ ಹಾಗೂ ನಿಯಂತ್ರಕನಾದ ದೇವನ ಬಳಿಗೆ ಹೋಗಲು ಸರಿಯಾದ ಮಾರ್ಗವನ್ನು ತೋರಿಸುವಂತೆ ಅವನನ್ನು ಪ್ರಾರ್ಥಿಸುವ ಸ್ಥಳವೂ ದೇವಾಲಯವೇ ಆಗಿದೆ. ಗತಕಾಲದ ಮಾನವನ ವಿವಿಧ ಕಾರ್ಯಚಟುವಟಿಕೆಗಳಲ್ಲಿ ದೇವಾಲಯಗಳ ಕಲ್ಪನೆ ಮತ್ತು ಆಚರಣೆಗಳ ಹಿನ್ನೆಲೆಯಲ್ಲಿ ವಾಸ್ತು, ಮೂರ್ತಿಶಿಲ್ಪಗಳ ನಿರ್ಮಾಣ ಆರಂಭವಾಯಿತು. ಈ ದೇವಾಲಯಗಳ ಸಮಾಜದಲ್ಲಿ ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಗಾಢವಾದ ಪರಿಣಾಮ ಬೀರಿವೆ. ಪ್ರಾಚೀನ ಕಾಲದಿಂದಲೂ ದೇವಾಲಯ ಮಠ, ಶಿಕ್ಷಣ, ಸಂಸ್ಥೆ ಹಾಗೂ ನ್ಯಾಯಾಲಯವೂ ಆಗಿ ಕಾರ್ಯ ನಿರ್ವಹಿಸುತ್ತಿತ್ತು. ವಾಸ್ತುಶಿಲ್ಪ ನಿರ್ಮಾಣದಲ್ಲಿ ಸಂಸ್ಕೃತಿಯ ಆಧ್ಯಾತ್ಮಿಕ ಚಿಂತನೆ ಅಥವಾ ಧಾರ್ಮಿಕ ಮೂಲಕಲ್ಪನೆಗೆ ಅಧಿಕ ಪ್ರಾಮುಖ್ಯತೆ ಇದ್ದರೂ ಅದಕ್ಕೆ ವಿರುದ್ಧವಾದ ಕಾಮ, ಕರ್ಮಾಚರಣೆ ಮತ್ತು ಲೌಕಿಕ ಸುಖಗಳನ್ನು ಅಳವಡಿಸಿಕೊಳ್ಳಲಾಗಿದೆ. ವಾಸ್ತುಶಿಲ್ಪವು ಸಂಸ್ಕೃತಿಯ ಉಗಮ, ವಿಕಾಸಗಳಿಗೆ ಮೂಲಸ್ಥಾನವಾಗಿದೆ.

ಕ್ರಿ.ಪೂ. ೩ನೇ ಶತಮಾನದಲ್ಲೇ ಭಾರತದಲ್ಲಿ ಬೌದ್ಧಸ್ತೂಪ ನಿರ್ಮಾಣ ಕಾಣಬಹುದು. ಕ್ರಿ.ಶ. ೭-೮ನೇ ಶತಮಾನದ ಹೊತ್ತಿಗೆ ದೇವಾಲಯಗಳ ರಚನಾಕ್ರಮದಲ್ಲಿ ಸ್ಪಷ್ಟತೆ ಮಾಡಲಾರಂಭಿಸಿತು ದೇವಾಲಯಗಳನ್ನು ಮರ, ಇಟ್ಟಿಗೆ ಮತ್ತು ಕಲ್ಲಿನಲ್ಲಿ ಕಟ್ಟಬಹುದು. ಇದರಲ್ಲಿ ಕಲ್ಲಿನ ದೇವಾಲಯ ಶ್ರೇಷ್ಠವೆಂಬ ನಂಬಿಕೆ ಇದೆ. ಸಮುದಾಯದ ಪ್ರತೀಕ ಎನಿಸಿದ ದೇವಾಲಯವನ್ನು ನಿಯಮಬದ್ಧವಾಗಿ ಕಟ್ಟಬೇಕು ಎಂಬ ಅರಿವು ಮೂಡಿದಾಗ ಅದಕ್ಕೆ ವಿಧಿ-ನಿಷೇಧಗಳನ್ನು ಹೇಳುವ ಶಾಸ್ತ್ರವೇ ಸಿದ್ಧವಾಯಿತು. ಇದೇ ವಾಸ್ತುವಿದ್ಯೆ. 'ವಾಸ್ತುಶಿಲ್ಪಶಾಸ್ತ್ರ' ಇದು ಅರವತ್ತು ನಾಲ್ಕು ಕಲೆಗಳಲ್ಲಿ ಒಂದಾಗಿದೆ. ವಾಸ್ತು(ನಿವೇಶನ)ವಿನ ಮೇಲೆ ರಚಿಸಲಾದ ಎಲ್ಲ ರಚನೆಗಳೂ ವಾಸ್ತುರಚನೆ ಎನಿಸುತ್ತವೆ. ಹೀಗೆ ಮನೆ, ಕೋಟೆ, ಕೆರೆ, ಸೇತುವೆ, ದೇವಾಲಯ ಮುಂತಾದ ಎಲ್ಲ ರಚನೆಯನ್ನು ವಾಸ್ತುಶಿಲ್ಪ ಒಳಗೊಳ್ಳುವುದರಿಂದ ದೇವಾಲಯ ರಚನೆಯನ್ನು ದೇವಾಲಯದ ವಾಸ್ತುಶಿಲ್ಪ, ಧಾರ್ಮಿಕ ವಾಸ್ತುಶಿಲ್ಪ ಎಂದು ಗುರ್ತಿಸುವರು.

ಶಿಲ್ಪಗ್ರಂಥಗಳಲ್ಲಿ ದೇವಾಲಯವನ್ನು ಪ್ರಸಾದ, ವಿಮಾನ, ಭವನ, ಹರ್ಮ್ಯ, ಸೌಧ, ನಿಕೇತನ, ಆಯತನ, ವೇಶ್ಮ, ಆಲಯ, ಮಂದಿರ ಇತ್ಯಾದಿಯಾಗಿ ಕರೆಯಲಾಗಿದೆ. ಆದರೂ ಹೆಚ್ಚಾಗಿ ವಿಮಾನ, ಪ್ರಸಾದ ಪದ ಬಳಕೆ ಮಾಡಲಾಗುತ್ತದೆ. ಭಾರತದಲ್ಲಿ ಕ್ರಿ.ಪೂ. ೩ನೇ ಶತಮಾನದಲ್ಲಿ ಸ್ತೂಪ ನಿರ್ಮಾಣ ತಿಳಿದ ಮೇಲೆ ತದನಂತರ ಬಂದ ಗುಪ್ತ ಕದಂಬರ ಕಾಲದ ದೇವಾಲಯ ಶೋಧನೆಯಲ್ಲಿ ಕಂಡುಬಂದಿವೆ.[೩]

ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪ ಶಾತವಾಹನರ ಕಾಲದ ಬೌದ್ಧಧರ್ಮದ ಚೈತ್ಯ, ಸ್ತೂಪ, ವಿಹಾರ ಕಂಡುಬರುತ್ತವೆ. ತಾಳಗುಂದದ ಮಹಾದೇವರ ದೇವಾಲಯ ಪೂಜೆಗೆ ಒಳಗಾಗಿತ್ತು ಎಂದು ಶಾಸನ ಹೇಳುತ್ತವೆ. ಸ್ಪಷ್ಟ ಮಾಹಿತಿ ಲಭ್ಯವಾಗಿಲ್ಲ. ಬಳ್ಳಾರಿ ಜಿಲ್ಲೆಯ ದೇವಾಲಯಗಳ ನಿರ್ಮಾಣದ ಬಗ್ಗೆ ಅರಿಯುವುದಾದರೆ ಇಲ್ಲಿಯ ಅತಿ ಪ್ರಾಚೀನ ಕಾಲದ ದೇವಾಲಯಗಳೆಂದರೆ ರಾಷ್ಟ್ರಕೂಟರ ಕಾಲದವು. ನಂತರ ನಿರ್ಮಾಣಗೊಂಡಿವೆ. ಇವರು ಹೆಚ್ಚಾಗಿ(ಕಲ್ಯಾಣಿ ಚಾಲುಕ್ಯರು ಉಸುಕು ಕಲ್ಲಿನ ಬದಲಾಗಿ ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ(ಕ್ಲೋರೈಟ್ ಸಿಸ್ಟ್) ಶಿಲೆಯನ್ನು ಉಪಯೋಗಿಸಿದ್ದರು. ಕೂಡ್ಲಿಗಿ ತಾಲ್ಲೂಕು ಹೋಬಳಿ ಇದಕ್ಕೆ ಹೊರತಾಗಿಲ್ಲ, ಅದರಲ್ಲಿ ಕೂಡ್ಲಿಗಿ ಹೋಬಳಿಯು ತಕ್ಕಮಟ್ಟಿನ ಏಕಕೂಟ, ದ್ವಿಕೂಟ ದೇವಾಲಯಗಳಿವೆ. ಅದರಲ್ಲಿ ಕೆಲವು ಕಲ್ಯಾಣಿ ಚಾಲುಕ್ಯರ ಕಾಲದ ಶಿಲ್ಪಕಲೆಯನ್ನು ಹೋಲುವ ದೇವಾಲಯಗಳು ಕಾಣಸಿಗುತ್ತವೆ. ಇವು ಸ್ಥಳೀಯವಾಗಿ ಸಿಗುವ ಗ್ರಾನೈಟ್(ಬೆಣಚು) ಕಲ್ಲಿನಲ್ಲಿಯೇ ನಿರ್ಮಾಣಗೊಂಡಿರುವುದು ವಿಶೇಷ.

## ದೇವಾಲಯ ರಚನೆ

ದೇವಾಲಯಗಳ ರಚನೆಯಲ್ಲಿ ಎರಡು ಸೂತ್ರಗಳನ್ನು ಅಳವಡಿಸಲಾಗಿರುತ್ತದೆ. ಅವುಗಳೇ 'ಮಾನಸೂತ್ರ' ಮತ್ತು ವಿನ್ಯಾಸಸೂತ್ರ. ಇವು ಕ್ರಮವಾಗಿ ದೇವಾಲಯ ರಚನೆಯ ಲಂಬರೇಖೆ ಮತ್ತು ಅಕ್ಷರೇಖೆಗಳಾಗಿದ್ದು, ದೇವಾಲಯದ ಅಳತೆ ಪ್ರಮಾಣವನ್ನೂ ಅದರ ಹೊರಚಾಚುವಿಕೆಯನ್ನು ಸೂಚಿಸುತ್ತದೆ. ಇದರಿಂದ ದೇವಾಲಯ ರಚನಾಕ್ರಮವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಉರ್ಧ್ವಮುಖಕ್ರಮ ಮತ್ತು ತಿರ್ಯಜ್ಮುಖಕ್ರಮ. ದೇವಾಲಯದ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೀತಿಯಲ್ಲಿ ರಚಿಸುವ ಕ್ರಮವನ್ನು ಉರ್ಧ್ವಮುಖಕ್ರಮ ಎಂದು ಅದೇ ರೀತಿ ಒಳಭಾಗದಲ್ಲಿ ಗರ್ಭಗೃಹ ಆದಿಯಾಗಿ ಅದರ ಮುಂದೆ ಇರುವ ಮಂಟಪ ಇತ್ಯಾದಿಗಳ ರಚನಾಕ್ರಮವನ್ನು ತಿರ್ಯಜ್ಮುಖಕ್ರಮ ಎಂದು ಹೇಳಬಹುದು. ಕೂಡ್ಲಿಗಿ ಹೋಬಳಿಯಲ್ಲಿ ಉರ್ಧ್ವಮುಖಕ್ರಮ ರಚನೆ ದೇವಾಲಯ ಎಲ್ಲೂ ಕಂಡುಬರುವುದಿಲ್ಲ. ಕೆಲವು ದೇವಾಲಯದಲ್ಲಿ 'ದ್ರಾವಿಡ' ಮಾದರಿಯ ಉರ್ಧ್ವಮುಖ ಕ್ರಮವನ್ನೇ ಅನುಸರಿಸಲಾಗಿದೆ. ಕೆಲವು ಪಾಳೆಗಾರರ ಮಾದರಿ ಹೋಲುತ್ತವೆ. ಆದರೆ ಕೂಡ್ಲಿಗಿ ಹೋಬಳಿ ಪರಿಸರದಲ್ಲಿ ತಿರ್ಯಜ್ಮುಖಕ್ರಮ ರಚನೆಯ ದೇವಾಲಯ ನಿರ್ಮಾಣ ಎಲ್ಲಾ ದೇವಾಲಯದಲ್ಲಿ ವಾಸ್ತುವಿಗೆ ರಚನೆಗೆ ಅನುಗುಣವಾಗಿ ನಿರ್ಮಿಸಲಾಗಿದೆ.

## ದೇವಾಲಯದ ಉರ್ಧ್ವಮುಖ ಕ್ರಮ

ಉರ್ಧ್ವಮುಖ ಕ್ರಮದಲ್ಲಿ(ಕೆಳಗಿನಿಂದ ಮೇಲಕ್ಕೆ) ಪ್ರಧಾನವಾಗಿ ಆರುಭಾಗ(ಷಡ್ವರ್ಗ)ಗಳಿಂದ ಕೂಡಿರುತ್ತದೆ. ಅವುಗಳು ಅನುಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಸೂಪ್ತಿಗಳಿಂದ ನಿರ್ಮಾಣಗೊಂಡಿರುತ್ತದೆ. ಇಂತಹ ಅಂಶಗಳುಳ್ಳ ದೇವಾಲಯ ರಚನೆ ಎಲ್ಲಿಯೂ ಕಾಣಸಿಗದು. ಆದರೆ ಅಧಿಷ್ಠಾನ ಸರಳವಾಗಿದ್ದು ಭಿತ್ತಿಯಲ್ಲಿ ಶೈವ ಮತ್ತು ವೈಷ್ಣವ ಶಿಲ್ಪಗಳು, ನಾಗಬಂಧ, ಪ್ರಾಣಿಶಿಲ್ಪಗಳು ಹಾಗೆ ಮಿಥುನಶಿಲ್ಪಗಳೇ ಹೆಚ್ಚಾಗಿ ಕಂಡುಬರುತ್ತವೆ. ಪ್ರಸ್ತುತ ವಿಷಯದಲ್ಲಿ ಅಲ್ಲಲ್ಲಿ ಕಪೋತ ಮಾದರಿಯ ನಿರ್ಮಾಣ ಕಂಡುಬರುತ್ತವೆ. ಮತ್ತೆ ಕೆಲವು ಸರಳ ಮಾದರಿಯ ರಚನೆಗಳೇ ಹೆಚ್ಚು. ಆದರೆ ಗ್ರೀವ, ಶಿಖರ, ಸೂಪ್ತಿ, ದ್ರಾವಿಡ ಮತ್ತು ಪಾಳೆಗಾರರ ವಿಜಯನಗರ ಶೈಲಿ ಹೋಲುತ್ತವೆ.

### ಅಧಿಷ್ಠಾನ

ಇದರಲ್ಲಿ ಉಪಾನ, ಜಗತೀ, ಖುರ, ಕುಂಭ, ಕುಮುದ, ಪದ್ಮ, ಗಳ, ಕಂಪ, ಕಪೋತ, ಪಟ್ಟಿಕಾ, ಪ್ರತಿಬಂಧ, ಪಾದಬಂಧ ಮುಖ್ಯ ಪ್ರಭೇದಗಳು. ಈ ತರದ ನಿರ್ಮಾಣ ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವಸ್ಥಾನದ ಪ್ರವೇಶ ದ್ವಾರದಲ್ಲಿ ಮಾತ್ರ ಕಾಣಸಿಗುತ್ತದೆ, ಮತ್ತೆಲ್ಲೂ ನೋಡಲಾಗುವುದಿಲ್ಲ.

### ಭಿತ್ತಿ

ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ(ಗೋಡೆ) ಇಲ್ಲಿ ನಿಶ್ಚಿತ ಅಂತರದಲ್ಲಿ ಕುಡ್ಯಸ್ತಂಭಗಳು ಇದ್ದು ಅವುಗಳ ನಡುವೆ ಕೋಷ್ಠ ಜಾಲಕ(ವಾತಾಯನ) ತೋರಣ, ಕುಂಭಲತಾ ಇತ್ಯಾದಿಗಳಿರುತ್ತವೆ. ಕೂಡ್ಲಿಗಿ ಹೋಬಳಿಯ ವಸಂತ ಮಲ್ಲಿಕಾರ್ಜುನ ದೇವಾಲಯದಲ್ಲಿ ಕೆಲವೊಂದು ಗಮನಿಸಬಹುದು.

### ಪ್ರಸ್ತರ

ಪ್ರಸ್ತರ ಭಿತ್ತಿಯ ಸ್ಥಂಭದಿಂದ ಆರಂಭವಾಗಿದ್ದು ಉತ್ತರ, ವಾಜನ, ವಲ್ಲಭೀ, ಕಪೋತ, ಆಲಿಂಗ, ಆಂತರಿಕ, ಪ್ರತೀವಾಜನ ಅಂಶಗಳನ್ನು ಹೊಂದಿರುತ್ತದೆ. ಇಂತಹ ಅಂಶಗಳುಳ್ಳ ದೇವಾಲಯಗಳು ವಿರಳ. ಈ ಹೋಬಳಿ ಭಾಗದಲ್ಲಿ ಪ್ರಸ್ತರದಲ್ಲಿ ಕೈಪಿಡಿಯನ್ನು ಹೊಂದಿದ ರಚನೆ ಕಾಣಬಹುದು.

## ಗ್ರೀವ, ಶಿಖರ ಮತ್ತು ಸ್ತೂಪಿ

ಇವು ಪ್ರಸ್ತರದ ಮೇಲ್ಕಟ್ಟಡ ಭಾಗಗಳು(Superstructure) ಇಲ್ಲಿ ಕ್ರಮವಾಗಿ ನಾಲ್ಕು, ಐದು, ಆರನೇ ಭಾಗಗಳಾದ ಇವು ದೇವತಾಶಿಲ್ಪ, ಕೋಷ್ಠಕಗಳಿಂದ ಕೂಡಿರುತ್ತದೆ. ಶಿಖರವು ಬೇರೆ ಬೇರೆ ಆಕಾರದಲ್ಲಿ ವಿಷ್ಣುಛಂದ, ರುದ್ರಛಂದ, ಶಾಲಾಕಾರ, ಗಜವೃಷ್ಠಾಕಾರ ವಿವಿಧ ಹೆಸರುಗಳಿಂದ ಗುರುತಿಸುತ್ತವೆ. ಪ್ರಧಾನವಾಗಿ ನಾಸಿಯಿಂದ ಅಲಂಕರಣಗೊಂಡಿರುತ್ತವೆ. ಈ ರೀತಿಯ ಭಾಗಗಳನ್ನು ಹೊಂದಿದ ದೇವಾಲಯಗಳು ಈ ಭಾಗದಲ್ಲಿ ಕಾಣುವುದಿಲ್ಲ.

## ದೇವಾಲಯದ ತಿರ್ಯಙ್ಮಖಕ್ರಮ

ದೇವಾಲಯದ ನಿರ್ಮಾಣ ಕ್ರಮದಲ್ಲಿ ತಿರ್ಯಙ್ಮಖಕ್ರಮವು ಗರ್ಭಗೃಹದಿಂದ ಆರಂಭವಾಗಿ ಅಂತರಾಳ ಸುಖನಾಸಿ(ಅರ್ಧಮಂಟಪ) ನವರಂಗ, ಸಭಾಮಂಟಪ, ಮಹಾಮಂಟಪ, ಮುಖಮಂಟಪ, ಸೋಪಾನ ಹಂತಗಳಿಂದ ರೂಪಿತವಾಗಿ ಒಂದೊಂದು ಭಾಗವು ಒಂದೊಂದು ವಿಶೇಷತೆ ಹೊಂದಿರುತ್ತವೆ. ಈ ತರಹದ ದೇವಾಲಯ ನಿರ್ಮಾಣ ಕೂಡ್ಲಿಗಿ ಹೋಬಳಿಯಲ್ಲಿ ಅಷ್ಟಾಗಿ ನಿರ್ಮಾಣವಾಗಿಲ್ಲ. ಕೆಲವೊಂದು ಹಂತಗಳನ್ನೊಳಗೊಂಡ ದೇವಾಲಯಗಳ ರಚನೆ ಮಾಡಲಾಗಿದೆ. ದೇವಾಲಯದಲ್ಲಿ ಗರ್ಭಗೃಹಿಂದ ಆರಂಭವಾದ ಈ ಹಂತಗಳಲ್ಲದೆ ಮುಖಮಂಟಪದಲ್ಲಿ ಕಕ್ಷಾಸನವೂ ಇರುವುದು ಕೆಲ ದೇವಾಲಯದಲ್ಲಿ ಕಂಡುಬರುತ್ತವೆ. ಜೊತೆಗೆ ನಂದಿಮಂಟಪ, ಕಲ್ಯಾಣಮಂಟಪ, ರಂಗಮಂಟಪಗಳೂ ಇರುವುದು ಉಂಟು. ಉದಾಹರಣೆಗೆ ವಸಂತ ಮಲ್ಲಿಕಾರ್ಜುನ ದೇವಾಲಯ ಈ ಗುಣಗಳನ್ನು ಮೈಗೂಡಿಸಿಕೊಂಡಿದೆ. ಮಂಟಪಗಳು ಅಲಂಕೃತ ಸ್ತಂಭಗಳು ವಿತಾನ(ಒಳಛಾವಣಿ) ದ್ವಾರ, ತೋರಣ ಮತ್ತು ಸೋಪಾನಗಳಿಂದ ಕೂಡಿರುತ್ತವೆ.

ದೇವಾಲಯದ ತಲವಿನ್ಯಾಸದ ಅತ್ಯಂತ ಪ್ರಮುಖ ಭಾಗವೆಂದರೆ 'ಗರ್ಭಗೃಹ' ದೇವಾಲಯ ಕೇಂದ್ರಬಿಂದು. ಉಳಿದ ಭಾಗಗಳು ಇದಕ್ಕೆ ಹೊಂದಿಕೊಂಡಂತೆ ನಿರ್ಮಾಣಗೊಂಡಿರುತ್ತವೆ. ಸಾಮಾನ್ಯವಾಗಿ ಗರ್ಭಗೃಹ ಚೌಕಾಕಾರವಾಗಿರುತ್ತದೆ. ಪ್ರಾಯಶಃ ಕೂಡ್ಲಿಗಿ ಹೋಬಳಿಯ ಎಲ್ಲ ದೇವಾಲಯಗಳು ಚೌಕಾಕಾರವಾಗಿದ್ದು, ಕೆಲವೊಂದು ಮಾತ್ರ ಆಯತಾಕಾರವಾಗಿದೆ(ಮುಂದೆ ವಿವರಿಸಲಾಗಿದೆ) ಕೂಡ್ಲಿಗಿ ಹೋಬಳಿಯ ಕೆಲವೇ ದೇವಾಲಯ ಅಂತರಾಳ ಹೊಂದಿವೆ. ಉದಾಹರಣೆಗೆ ಕೂಡ್ಲಿಯ ಎರಡು ಶಿವ ದೇವಾಲಯ. ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವಾಲಯ, ಅಮರ ದೇವರಗುಡ್ಡದ ಅಮರೇಶ್ವರ ದೇವಾಲಯ ಇನ್ನೂ ಹೋಬಳಿಯ ಹೆಚ್ಚಿನ ದೇವಾಲಯಗಳು ಗರ್ಭಗೃಹ ಸಭಾಮಂಟಪಗಳಿಂದ ಕೂಡಿರುವುದೇ ಹೆಚ್ಚು. ಅದರಲ್ಲಿ ಗರ್ಭಗೃಹದಿಂದ ಮುಂಚಾಚಿದ ಭಾಗಗಳಲ್ಲಿ ಕೂಡ್ಲಿಗಿಯ ರಾಮಲಿಂಗೇಶ್ವರ ದೇವಾಲಯ ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವಾಲಯಗಳು ಗರ್ಭಗೃಹ ಅಂತರಾಳ ಸಭಾಮಂಟಪ ಅಲ್ಲದೆ ಅರ್ಧಮಂಟಪ, ಮಹಾಮಂಟಪ, ಮುಖಮಂಟಪ ಹಾಗೂ ಎರಡು ದ್ವಾರಬಾಗಿಲುಗಳನ್ನು ಹೊಂದಿರುವುದು ಕಾಣುತ್ತೇವೆ. ಕೂಡ್ಲಿಗಿ ಹೋಬಳಿಯಲ್ಲಿ ಏಕಕೂಟ ದೇವಾಲಯಗಳೇ ಹೆಚ್ಚು. ಹಾಗೆ ಕೂಡ್ಲಿಗಿ ತಾಲ್ಲೂಕು ಹೋಬಳಿಯಲ್ಲೇ ಏಕೈಕ ದ್ವಿಕೂಟ ದೇವಾಲಯ ಸಾಸಲವಾಡದ ರಾಮಲಿಂಗೇಶ್ವರ ದೇವಾಲಯ ಮಾತ್ರ ತ್ರಿಕೂಟಚಲ ದೇವಾಲಯದ ನಿರ್ಮಾಣ ಹೋಬಳಿಯ ಒರೇಹೆಗ್ಡಾಳನ ಈಶ್ವರ ದೇವಾಲಯ ಒಂದೇ ಚತುಷ್ಕೂಟ ಮತ್ತು ಪಂಚಕೂಟ ದೇವಾಲಯ ತಾಲ್ಲೂಕಲ್ಲಿ ಉಜ್ಜನಿಯ ಮರುಳುಸಿದ್ದೇಶ್ವರ ದೇವಾಲಯ ಪಂಚಕೂಟ ದೇವಾಲಯವಾಗಿದೆ.[೪]

### ಕಂಬರಚನೆ

ಯಾವುದೇ ಒಂದು ವಸ್ತು ಸ್ಥಿರವಾಗಿ ದೃಢವಾಗಿ ನಿಲ್ಲಬೇಕಾದರೆ ಅದಕ್ಕೊಂದು ಆಧಾರಬೇಕು, ಪ್ರಾಚೀನ ಕಾಲದ ಮನೆ ಮತ್ತು ದೇವಾಲಯಗಳನ್ನು ಗಮನಿಸಿದರೆ ಅವುಗಳ ಭದ್ರತೆಗೆ ಸ್ತಂಭಗಳೇ ಆಧಾರ. ಇದರಂತೆ ಸರ್ವಲೋಕಕ್ಕೆ ಆಧಾರನಾದ ಶಿವನನ್ನು ಮೂಲಸ್ತಂಭ ಎಂದು ಶಾಸನ ಉಲ್ಲೇಖಿಸುತ್ತವೆ. ಮಯಮತ, ಮಾನಸಾರ, ಕಾಮಿಕಾಗಮ, ಸುಪ್ರಭೇದಾಗಮ ಮುಂತಾದ ಶಾಸ್ತ್ರ ಗ್ರಂಥಗಳು ಸ್ತಂಭಗಳ ಬಗ್ಗೆ ಹೆಚ್ಚು ಮಾಹಿತಿಗಳನ್ನು ಒದಗಿಸುತ್ತವೆ. ಕಂಬದ ಮೊದಲ ಭಾಗವೇ 'ಪೀಠ' ಚೌಕಾಕಾರವಾಗಿರಬೇಕು, ಮಾನಸಾರದಲ್ಲಿ ತಿಳಿಸಿದೆ. ಇದನ್ನು ಸಣ್ಣ ವೇದಿಕೆಯಂತೆ ರಚಿಸಬಹುದು. ನಂತರ 'ದಂಡ' ಅನಂತರ ಮೇಲಿನದು 'ಗ್ರೀವ' ಭಾಗವಾಗಿ ಗುರ್ತಿಸಲಾಗುವುದು, ಇದರಲ್ಲಿ ಬೋದಿಗೆಯು ಇರುತ್ತದೆ.[೫]

### ಪೀಠ

ಪೀಠ ಮೂಲದಲ್ಲಿದ್ದು ಅದರ ಮೇಲಿನ ಭಾಗವೇ ಪಾದ, ಇದು ಚೌಕಾಕಾರದ ಪಟ್ಟಿಕೆಯ ರೀತಿಯಲ್ಲಿರುತ್ತದೆ. ಸಿಂಹ, ವ್ಯಾಳಿ ಇತ್ಯಾದಿಗಳನ್ನು ಈ ಭಾಗದಲ್ಲಿ ಕೆತ್ತಲಾಗಿರುತ್ತದೆ. ಇಂತಹ ಸಿಂಹ, ವ್ಯಾಳಿ ಇರುವ ಕಂಬಗಳು, ಕೂಡ್ಲಿಗಿಯ, ಕೇಶವ ದೇವಾಲಯ, ಕಪಿಲೇಶ್ವರ ದೇವಾಲಯ ದೇವಲಾಪುರದ ವಸಂತೇಶ್ವರ ದೇವಾಲಯ ವೀರನ ದುರ್ಗದ ರುದ್ರಯ್ಯನಮಠ ಮುಂತಾದ ಭಾಗದಲ್ಲಿವೆ. ಇದರ ಮೇಲಿನ ಭಾಗವೇ ದಂಡ, ಇದು ಕಂಬದಲ್ಲಿ ಬಹುಮುಖಭಾಗ ಅಂದರೆ ಎಂಟು ೧೬ ಪಟ್ಟಿಗಳಿಂದ ವಿನ್ಯಾಸವಾಗಿವೆ. ಕಂಬದ ರೂಪ ವಿನ್ಯಾಸ ದಂಡದ ಮೇಲೆ ನಿರ್ಧರಿಸಲಾಗಿರುತ್ತದೆ. ಇದರಲ್ಲಿ ನಾಲ್ಕು ಮುಖ ಹೊಂದಿದ್ದರೆ ಬ್ರಹ್ಮಕಾಂತ ಐದು ಮುಖವಿದ್ದರೆ ಶಿವಕಾಂತ ಆರು ಮುಖಗಳಿದ್ದರೆ ಸ್ಕಂದಕಾಂತ ಎಂಟು ಮುಖವಿದ್ದರೆ ವಿಷ್ಣುಕಾಂತ ಹದಿನಾರು ಅಥವಾ ವೃತ್ತಾಕಾರವಾಗಿದ್ದರೆ ರುದ್ರಕಾಂತ ಎಂದು ಮಾನಸಾರ ಗ್ರಂಥದಲ್ಲಿ ಹೇಳಿದೆ. ಈ ತರದ ಕಂಬ ನಿರ್ಮಾಣ ಹೋಬಳಿಯಲ್ಲಿ ನೋಡುವುದಾದರೆ ಬ್ರಹ್ಮಕಾಂತ ಕಂಬ ನಿರ್ಮಾಣ ಅಧಿಕ.[೬]

### ಕಂಬದ ಪ್ರಭೇದಗಳು

ಕಂಬಗಳಲ್ಲಿ ೧. ಪದ್ಮಕಾಂತ ೨. ಚಿತ್ರಸ್ಕಂಭ ೩. ಚಿತ್ರಕಂಠ ೪. ಕುಂಭಸ್ತಂಭ

ಕೋಷ್ಟಿಸ್ತಂಭ ಸಂಯೋಗಸ್ತಂಭ ಪ್ರಕಾರಗಳಿವೆ. ಇದರಲ್ಲಿ ಕೂಡ್ಲಿಗಿ ಹೋಬಳಿಯಲ್ಲಿ ಕುಂಭಸ್ತಂಭ, ಚಿತ್ರಸ್ಕಂಭಗಳ ರಚನೆ ಅಲ್ಲಲ್ಲಿ ಆಗಿದೆ. ಹೆಚ್ಚಾಗಿ ಸರಳ ಸಾಧಾರಣ ಕಂಬರಚನೆ ಹೆಚ್ಚು. ಕಂಬ ರಚನೆಯ ಮೂಲ ಪೀಠವಾದರೆ ನಂತರ ಪಾದ ದಂಡ ಗ್ರೀವ ರಚನೆಗೊಂಡಿರುತ್ತವೆ. ಗ್ರೀವಭಾಗ ಕೆಲ ಭಾಗಗಳನ್ನು ಮೈತಳೆದಿರುತ್ತದೆ. ಕಲಶ, ಹಾರಿಕಾ, ಅಸ್ಯ, ತಾಟಿಕಾ, ಕಂಠ, ಕುಂಭ, ನಿಮ್ನಕ, ಫಲಕ, ವೀರಕಂಠ ಇವುಗಳ ಮೇಲೆ ಬರುವ ಬೋದಿಗೆಗಳು ನಿರ್ಮಿಸಲಾಗಿರುತ್ತದೆ. ಬೋದಿಗೆಯಲ್ಲಿ ತರಂಗಬೋದಿಗೆ, ಪುಷ್ಪಬೋದಿಗೆ ವಿಧಗಳಿರುತ್ತವೆ.[೭]

### ತರಂಗಬೋದಿಗೆ

ಅಲೆ ಅಲೆಯಾಗಿ ಕಾಣುವಂತೆ ರಚಿಸಿ ಅಲಂಕರಿಸಿದರೆ ಆಗ ಅದು ತರಂಗ ಬೋದಿಗೆಯಾಗುವುದು. ಈ ಬೋದಿಗೆಯ ಮಧ್ಯಪಟ್ಟಿಕೆ ಇರುತ್ತದೆ. ಅದರ ಮೇಲೆ ಬಳ್ಳಿ ಅಥವಾ ವಿಭಿನ್ನ ಚಿತ್ರಗಳಿರುತ್ತವೆ. ಬೋದಿಗೆ

ಕಂಬದ ಎರಡು ಕಡೆ ಚಾಚಿ ಉಳಿದೆರಡು ಭಾಗದಲ್ಲಿ ಚೌಕಾಕೃತಿಯ ಫಲಕ ಇರುತ್ತದೆ. ಇದನ್ನು ಮಾನಸಾರ ಮಧ್ಯಭದ್ರ ಎಂದು ತಿಳಿಸಿದೆ. ಈ ರೀತಿಯ ಕಂಬ ರಚನೆಯು ದೇವಲಾಪುರ ಮತ್ತು ಕೆಲ ಭಾಗದ ದೇವಾಲಯದಲ್ಲಿ ಕಾಣುತ್ತೇವೆ.

**ಪುಷ್ಪಬೋದಿಗೆ**

ಇದರ ಹೇಳಿಕೆ ನೀಡುವುದು ಮಾನಸಾರ. ಎಲೆ, ಬಳ್ಳಿ ಚಿತ್ರಗಳಿಂದ ಅಲಂಕರಿಸಿ ಪುಷ್ಪ ಬೋದಿಗೆಯನ್ನು ರಚಿಸಬೇಕೆಂದು ಅದರಲ್ಲಿ ಹೇಳಿದೆ. ಇದು ವಿಜಯನಗರ ಕಾಲದಲ್ಲಿ ಹೆಚ್ಚು ಕಂಡುಬರುವುದು ಹೋಬಳಿಯ ವೀರನದುರ್ಗದ ರುದ್ರಯ್ಯನಮಠ ಈ ತರದ ಪುಷ್ಪಬೋದಿಗೆ ರಚನೆಯಾಗಿದೆ. ಈ ಎಲ್ಲ ಅಂಶಗಳನ್ನು ಗಮನಿಸಿ, ಕೂಡ್ಲಿಗಿ ಹೋಬಳಿಯಲ್ಲಿ ಕಂಡುಬರುವ ಪ್ರಮುಖ ಉಕ್ತ ದೇವಾಲಯಗಳ ವಿವರಗಳಲ್ಲದೆ, ನನ್ನ ಕ್ಷೇತ್ರ ಕಾರ್ಯದಲ್ಲಿ ಹೊಸದಾಗಿ ಗುರ್ತಿಸಿದ ಕೂಡ್ಲಿಗಿ ಪಟ್ಟಣದ ಕೇಶವ ದೇವಾಲಯ ಮತ್ತು ಕಪಿಲೇಶ್ವರ ದೇವಾಲಯಗಳ ಉಲ್ಲೇಖ ಮಾಡಲಾಗಿದೆ.[೮]

ಗ್ರಾಮ : ಅಮರ ದೇವರಗುಡ್ಡ

ಹೆಸರು : ಅಮರೇಶ್ವರ ದೇವಾಲಯ

ಕಾಲಮಾನ : ಕ್ರಿ.ಶ. ೧೬ನೇ ಶತಮಾನ

ದಿಕ್ಕು : ದಕ್ಷಿಣಾಭಿಮುಖ

ಶೈಲಿ : ಪಾಳೇಗಾರ

ಈ ದೇವರ ಹೆಸರಿನಿಂದ ಗ್ರಾಮಕ್ಕೆ ಆ ಹೆಸರು ಬಂದಿದೆ. ದೇವಾಲಯವು ಮುಖ್ಯವಾಗಿ ಗರ್ಭಗೃಹ, ಅಂತರಾಳ, ಹೊಂದಿದೆ. ಕಣಶಿಲೆಯಲ್ಲಿ ದೇವಾಲಯ ನಿರ್ಮಿಸಲಾಗಿದ್ದು, ಗುಡ್ಡದ ದೇವಾಲಯ ಸುತ್ತಮುತ್ತ ಪಾಳೇಗಾರರ ಕಾಲದ್ದು ಎನ್ನಬಹುದಾದ ಕೋಟೆ ಅವಶೇಷವಿದೆ.[೯]

ಹೆಸರು : ಬಸವೇಶ್ವರ ದೇವಾಲಯ

ಗ್ರಾಮ : ಅಮ್ಮನಕೇರಿ

ಕಾಲಮಾನ : ೧೬ನೇ ಶತಮಾನ

ದಿಕ್ಕು : ದಕ್ಷಿಣ

ಶೈಲಿ : ಪಾಳೇಗಾರ ಶೈಲಿ

ದೇವಾಲಯ ಗರ್ಭಗೃಹ ಸಭಾಮಂಟಪದಿಂದ ಕೂಡಿದ್ದು, ಇಲ್ಲಿನ ಕಂಬಗಳು ಕೆಳ ಮತ್ತು ಮೇಲ್ಭಾಗಗಳು ಚಚ್ಚೌಕವಾಗಿ ಮಧ್ಯದಲ್ಲಿ ಬಹುಮುಖಗಳಲ್ಲೂ ಕೆತ್ತಲಾಗಿದೆ. ಕಣಶಿಲೆಯಲ್ಲಿ ನಿರ್ಮಿಸಲಾಗಿದೆ ಎಂದು ಹೇಳಲಾಗುತ್ತದೆ.[೧೦]

ಹೆಸರು : ಆಂಜನೇಯ ದೇವಸ್ಥಾನ

ಗ್ರಾಮ : ಕುಪ್ಪಿನ ಕೇರಿ

ಕಾಲಮಾನ : ೧೭ನೇ ಶತಮಾನ

ದಿಕ್ಕು : ದಕ್ಷಿಣ

ಶೈಲಿ : ವಿಜಯನಗರೋತ್ತರ

ಕ್ರಿ.ಶ. ೧೭ನೆಯ ಶತಮಾನದಲ್ಲಿ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ಕೆಂಪಯ್ಯಸ್ವಾಮಿ, ಗೋಣಿಬಸವೇಶ್ವರಸ್ವಾಮಿ, ಕೊಟ್ಟೂರೇಶ್ವರ ಹಾಗೂ ಕೋಲಶಾಂತವೀರ ಶರಣರು ಕುಪ್ಪಿನಕೆರೆಗೆ ಬಂದಾಗ ಆಂಜನೇಯನಿಗೆ ಲಿಂಗಧಾರಣೆ ಮಾಡಿದರೆಂದು ಮಾತೊಂದಿದೆ. ಈ ದೇವಾಲಯ ಗರ್ಭಗೃಹ, ಸಭಾಮಂಟಪ, ದ್ವಾರಬಾಗಿಲು,[೧೧] ದ್ವೀಪಸ್ತಂಭ ಹೊಂದಿದೆ. ಗರ್ಭಗೃಹದ ಮೇಲ್ಭಾಗ ದ್ರಾವಿಡ ಮಾದರಿಯ ಶಿಖರವಿದೆ.

ಹೆಸರು : ಕೊತ್ತಲ ಆಂಜನೇಯ

ಗ್ರಾಮ : ಕೂಡ್ಲಿಗಿ

ಕಾಲಮಾನ : ೧೮ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ವಿಜಯನಗರೋತ್ತರ

ಈ ದೇವಾಲಯ ಗರ್ಭಗೃಹ ಸಭಾಮಂಟಪ ಮತ್ತು ದೀಪಸ್ತಂಭಗಳಿವೆ.[೧೨] ಇಲ್ಲಿನ ಆಂಜನೇಯ ಕೋಟೆಗೋಡೆಯ ಮೇಲೆ ಒಡಮೂಡಿತ್ತಂತೆ ಅದನ್ನು ಸ್ಥಳೀಯ ವಿಜಯನಗರದ ಸೈನಿಕರು, ಪಾಳೇಗಾರರು, ಪೂಜೆಗೈಯುತ್ತಿದ್ದು, ಕೋಟೆ ಭಾಗವಾದ ಕೊತ್ತಲದ ಕಲ್ಲಿನಲ್ಲಿ ಮೈತಳೆದುದರಿಂದ ಇದಕ್ಕೆ ಕೊತ್ತಲ ಆಂಜನೇಯ ಎಂಬ ನಾಮದೇಯ ಇದ್ದು, ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಪಾಳೆಗಾರರು ಇಲ್ಲಿಗೆ ಬಂದಾಗಲೆಲ್ಲ ಭಕ್ತಿಯಿಂದ ಆರಾಧಿಸುತ್ತಿದ್ದರು ಎಂಬುದು ಸ್ಥಳೀಯ, ಹಿರಿಯರ ಅಭಿಮತ, ಕೋಟೆ–ಕೊತ್ತಲು ಶಿಥಿಲಗೊಂಡು, ಆ ಕಲ್ಲಿನಲ್ಲಿ ಒಡಮೂಡಿದ ಮೂರ್ತಿಗೆ ಪ್ರತ್ಯೇಕವಾಗಿ ದೇವಾಲಯ ನಿರ್ಮಿಸಲಾಯಿತು ಎನ್ನಲಾಗುತ್ತದೆ. ಕುಪ್ಪಿನ ಕೆರೆ ಆಂಜನೇಯನ ಹಾಗೆ ಈ ಆಂಜನೇಯ ಮತ್ತು ರಾಮಲಿಂಗೇಶ್ವರ ಲಿಂಗವು ಪಂಚ ಶರಣರಿಂದ ಅರ್ಚನೆಗೆ ಒಳಪಟ್ಟಿದ್ದವು ಎಂಬುದು ದೇವಾಲಯದ ಮಾಹಿತಿಯಿಂದ ತಿಳಿಯುತ್ತದೆ. ಗ್ರಾನೈಟ್‌ಶಿಲೆಯಲ್ಲಿ ನಿರ್ಮಾಣವಾದ ದೇವಾಲಯ, ಗರ್ಭಗೃಹ ಆಂಜನೇಯ ಉಬ್ಬುಶಿಲ್ಪದಂತೆ ಕಂಡುಬರುತ್ತಿದ್ದು ೨ ೧/೨ ಅಡಿ ಎತ್ತರವಾಗಿದೆ. ದೇಗುಲವು ಗರ್ಭಗೃಹ ಸಭಾಮಂಟಪ ಇದ್ದು ಸಭಾಮಂಟಪದಲ್ಲಿ ನಾಲ್ಕು ಕಂಬಗಳಿದ್ದು ಚೌಕಾಕಾರವಾಗಿದೆ, ಪ್ರಕಾರಗೋಡೆ ಇತ್ತು. ಆದರೆ ಇಂದು ನವೀಕರಣಗೊಳಿಸಲಾಗುತ್ತಿದೆ.

ಹೆಸರು : ರಾಮಲಿಂಗೇಶ್ವರ ದೇವಾಲಯ

ಗ್ರಾಮ : ಕೂಡ್ಲಿಗಿ

ಕಾಲಮಾನ : ೧೭ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ವಿಜಯನಗರೋತ್ತರ

ಈ ದೇಗುಲ ಗರ್ಭಗೃಹ, ಅಂತರಾಳ, ಸಭಾಮಂಟಪ ಪ್ರಕಾರಗೋಡೆ ಹಾಗೂ ದೀಪ ಸ್ತಂಭಗಳನ್ನು ಹೊಂದಿದೆ. ದ್ವಾರದ ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಕಂಬಗಳು ಚಚ್ಚೌಕಾರವಾಗಿವೆ. ದೇವಾಲಯ ಅಲಂಕರಣೆ ಹೊಂದಿಲ್ಲ. ಸಭಾಮಂಟಪದ ಕೈಪಿಡಿಯಲ್ಲಿ ನಂದಿ, ಸಿಂಹ, ಮತ್ತಿತರ ಗಾರೆಶಿಲ್ಪಗಳಿದ್ದು[೧೩]

ದೇವಾಲಯದ ಕುರಿತಾದ ಐತಿಹ್ಯ ಸ್ಥಳೀಯವಾಗಿ ಈ ರೀತಿ ಹೇಳುತ್ತದೆ. ಶ್ರೀರಾಮ ಲಂಕ ಕಡೆ ಹೋಗುವಾಗ ಕಪಿಗಳೆಲ್ಲ ಇಲ್ಲಿ ಬಂದು ಕೊಡಲಾಗಿ, ಆ ಸಂದರ್ಭದಲ್ಲಿ ದಟ್ಟ ಕಾನನವಾಗಿದ್ದ ಈ ಪ್ರದೇಶ ತಿರುಗಿಣಿಹಳ್ಳ(ತಿರುಗಿಣಿಗಡ್ಡೆ/ದೊಡ್ಡಳ್ಳ) ದಂಡೆ ಮೇಲೆ ರಾಮಲಿಂಗವನ್ನು ಪ್ರತಿಷ್ಠಾಪಿಸಿದ್ದರಿಂದ ಈ ದೇವರಿಗೆ ರಾಮ+ಲಿಂಗವನ್ನು ಈಶ್ವರನ ರೂಪದಲ್ಲಿ ಸ್ಥಾಪಿಸಿದ್ದರಿಂದ ಇದಕ್ಕೆ ರಾಮಲಿಂಗೇಶ್ವರ ಎಂಬುದಾಗಿ ಕರೆಯಲ್ಪಟ್ಟಿತ್ತಂತೆ. ಆಗಾಗ ವಿಜಯನಗರದ ವಿರೂಪಾಕ್ಷನ ದರ್ಶನಕ್ಕೆಂದು ಹೋಗುತ್ತಿದ್ದ ಪಂಚ ಗಣೇಶ್ವರರು/ಶರಣರು ಈ ಲಿಂಗವನ್ನು ದರ್ಶನ ಪಡೆದು ಸಾಗುತ್ತಿದ್ದರು. ಆದರೆ ಆ ಜಾಗದಲ್ಲಿ ಈಗ ಪಾಣಿಪೀಠದ ಶಿವಲಿಂಗ ಇಡಲಾಗಿದೆ. ದೇವಾಲಯದ ಆವರಣದಲ್ಲಿ ತುಂಬಾ ಸವೆದುಹೋದ ಶಾಸನ ರೂಪದ ಪಲಕವಿದೆ. ಅದು ಅಸ್ಪಷ್ಟವಾಗಿದೆ. ಪ್ರವೇಶದ್ವಾರದ ಬಲಭಾಗದಲ್ಲಿ ಅಶ್ವತವೃಕ್ಷದಡಿಯಲ್ಲಿ ಕಪ್ಪುಶಿಲೆಯಲ್ಲಿ ನಿರ್ಮಿಸಲಾದ ವೀರಗಲ್ಲು ಕಂಡುಬರುತ್ತದೆ. ಇದು ಎರಡು ಹಂತದಲ್ಲಿ ನಿರ್ಮಿಸಲಾಗಿದೆ.

ಹೆಸರು : ಅನಂತಶಯನ ದೇವಾಲಯ

ಗ್ರಾಮ : ಕೈವಲ್ಯಾಪುರ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ವಿಜಯನಗರ

ಅನಂತ ಪದ್ಮನಾಭ ದೇವಾಲಯ ಅನಂತಗುಡಿ ಎಂದು ಸಹ ಕರೆಯಲಾಗುತ್ತದೆ. ಗರ್ಭಗೃಹ, ಸಭಾಮಂಟಪಗಳಿದ್ದು, ಈ ದೇವಾಲಯಕ್ಕೆ ಇತ್ತೀಚೆಗೆ ನಾಲ್ಕು ಕಂಬಗಳಿಂದ ಕೂಡಿದ ಮತ್ತೊಂದು ಮಂಟಪ ನಿರ್ಮಾಣಗೊಂಡಿದೆ. ಗರ್ಭಗುಡಿಯಲ್ಲಿ ಏಳು ಹೆಡೆಗಳನ್ನು ಬಿಚ್ಚಿ ಹರಡಿರುವ ಆದಿಶೇಷನ ಮೇಲೆ ಸುಂದರ ಮೂರ್ತಿ ರೂಪದಲ್ಲಿ ಮಲಗಿರುವ ಅನಂತಶಯನ ಇದ್ದಾನೆ. ನಾಭಿಯೆಂದ ಹೊರಟ ಕಮಲದಲ್ಲಿ ಬ್ರಹ್ಮನಿದ್ದು ಚರಣದಲ್ಲಿ ಲಕ್ಷ್ಮೀಯು ವೀರಾಜಮಾನಳಾಗಿ ಪಾದ ಸೇವೆಗೈಯುತ್ತಿದ್ದಾಳೆ. ಗರ್ಭಗೃಹದ ಮುಂದಿನ ಗೋಡೆಯಲ್ಲಿ ಕೆಲವು ವೈಷ್ಣವ ಶಿಲ್ಪಪಟ್ಟಿಕೆ ಇದೆ.[೧೪] ಈ ಹಿಂದೆ ಈ ಗ್ರಾಮ ಶಾನಭೋಗರ ಆಳ್ವಿಕೆಗೆ ಒಳಗಾಗಿತ್ತಂತೆ. ಪಶ್ಚಿಮಕ್ಕೆ ಒಂದು ಕಿ.ಮೀ. ದೂರದಲ್ಲಿ ಇನ್ನೊಂದು ಗ್ರಾಮವಿದ್ದು ಈ ಗ್ರಾಮದ ಅಧೀನಕ್ಕೆ ಒಳಪಟ್ಟಿದ್ದು ಅಲ್ಲಿ ಕಾಲರದಿಂದ ಆ ಜನರೆಲ್ಲ ಇಲ್ಲಿಗೆ ಬಂದು ನೆಲೆಸಿದರು ಎನ್ನುತ್ತಾರೆ ಸ್ಥಳೀಯರು.

ಹೆಸರು : ವಸಂತ ಮಲ್ಲಿಕಾರ್ಜುನ ದೇವಾಲಯ

ಗ್ರಾಮ : ದೇವಲಾಪುರ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಉತ್ತರ

ಶೈಲಿ : ವಿಜಯನಗರ

ದೇವಲಾಪುರದ ವಸಂತ ಮಲ್ಲಿಕಾರ್ಜುನ ಸ್ಥಳ ಇಂದು ಬೇಚರಾಕ ಗ್ರಾಮವಾಗಿದೆ. ವಿಜಯನಗರ ಕಾಲದಲ್ಲಿ ವಾಸ್ತವ್ಯವಿದ್ದ ಲಕ್ಷಣ ಕಂಡುಬರುತ್ತದೆ. ಇಲ್ಲಿನ ಸುತ್ತಮತ್ತ ದೇಗುಲ, ಕೋಟೆ, ಕೆರೆ, ಬಾವಿ ಇನ್ನೂ ಮುಂತಾದ ಅವಶೇಷ ಕಾಣಬಹುದು. ವಸಂತ ಮಲ್ಲಿಕಾರ್ಜುನನನ್ನು ಸ್ಥಳೀಯರು ಕುರಿಕ್ಕಿಲಿಂಗ ಎಂಬ

ಹೆಸರಿನಿಂದ ಕರೆಯುತ್ತಾರೆ. ಕ್ರಿ.ಶ. ೧೫೫೨ರ ಸದಾಶಿವರಾಯನ ಕಾಲದ ಶಾಸನವು ಈ ದೇವಾಲಯವನ್ನು ವಸಂತ ಮಲ್ಲಿಕಾರ್ಜುನನೆಂದು ಕರೆದಿದೆ.

ಈ ದೇವಾಲಯ ನಿರ್ಮಾಣ ಶಾಸನದಿಂದ ತಿಳಿದುಬರುತ್ತದೆ. ಈ ದೇವಾಲಯ ಗರ್ಭಗೃಹ, ಅಂತರಾಳ, ಅರ್ಧಮಂಟಪ, ಸಭಾಮಂಟಪ, ಮಹಾಮಂಟಪ, ಮುಖಮಂಟಪ ಹಾಗೂ ಎರಡು ದ್ವಾರಬಾಗಿಲುಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಹಾಸು ಬಂಡೆಯಲ್ಲಿ ಕೆತ್ತಲಾದ ಶಿವಲಿಂಗವಿದೆ. ಇದು ಅರ್ಧ ಅಡಿ ಎತ್ತರವಾಗಿದೆ. ಇದರ ಬಳಿಯಲ್ಲಿ ಇನ್ನೊಂದು ಶಿವಲಿಂಗ ಪ್ರತಿಷ್ಠಾಪಿಸಲಾಗಿದೆ. ಸಭಾಮಂಟಪಕ್ಕೆ ಮೂರು ಬಾಗಿಲುಗಳಿದ್ದು, ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಇವು ಚಚ್ಚೌಕವಾಗಿದ್ದು, ಉಬ್ಬುಶಿಲ್ಪಗಳನ್ನು ಹೊಂದಿವೆ. ಇದೇ ಮಾದರಿಯ ನಾಲ್ಕು ಕಂಬಗಳು ಮಹಾ ಮಂಟಪದಲ್ಲಿವೆ. ಇವು ಕಂಬಗಳ ಮೇಲ್ಭಾಗದಲ್ಲಿ ದಿಂಬಿನಾಕಾರ, ವೃತ್ತಾಕಾರ ಹಾಗೂ ಮುಗುಚಿದ ಬೋಗಣಿಯಂತಿರುವ ಬೋದಿಗಳಿವೆ. ವಸಂತೇಶ್ವರ, ರಥೋತ್ಸವ ಶಿವರಾತ್ರಿ ಸಂದರ್ಭದಲ್ಲಿ ಜರುಗುತ್ತದೆ.[೧೫] ಈತನ ಆರಾದಕರು ಬಡೇಲಡಕು, ತುಪ್ಪಾಕನಹಳ್ಳಿ, ನಾಗಲಾಪುರ, ಅಕ್ಕಾಪುರ, ಗಜಾಪುರ, ಕೂಡ್ಲಿಗಿ ಸುತ್ತಮುತ್ತಲಿನ ಹಳ್ಳಿಯ ಭಕ್ತ ಸಮೂಹ ರಥೋತ್ಸವದಲ್ಲಿ ಪಾಲ್ಗೊಳ್ಳುತ್ತದೆ. ಈ ದೇವಾಲಯದ ಅರ್ಚಕರು ಇಂದು 'ತುಪ್ಪಾಕ್ಕನಹಳ್ಳಿಯಲ್ಲಿ' ವಾಸ್ತವ್ಯವಿದ್ದು, ಪ್ರತಿದಿನ ಎರಡು ಕಿ.ಮೀ. ನಡುಗೆ ಸವಿಸಿ ಪೂಜಾಕಾರ್ಯ ನೆರವೇರಿಸುತ್ತಾರೆ. ಈ ಭಾಗದ ಅತ್ಯಂತ ಪ್ರಸಿದ್ಧಿ ದೇವಾಲಯವಿದು.

ಹೆಸರು : ಮಲಿಯಮ್ಮ

ಗ್ರಾಮ : ಬೀರಲಗುಡ್ಡ(ವೀರನದುರ್ಗ)

ಕಾಲಮಾನ : ೧೮ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ವಿಜಯನಗರೋತ್ತರ

ಪಾಳೇಗಾರರ ಕಾಲದಲ್ಲಿ ನಿರ್ಮಾಣವಾಗಿರಬಹುದು ಎಂದು ಹೇಳಲಾಗುವ ಕೋಟೆಯು ಜರಿಮಲೆ ಮತ್ತು ಹರಪನಹಳ್ಳಿ ಪಾಳೇಗಾರರ ಆಳ್ವಿಕೆಯ ಕಾಲದಲ್ಲಿ ಪ್ರಸಿದ್ಧಿ ಪಡೆದಿತ್ತು. ಕೋಟೆಯ ಮೇಲ್ಭಾಗದಲ್ಲಿ ಮಲಿಯಮ್ಮದೇವಿ ದೇವಾಲಯ ನಿರ್ಮಾಣ ಮಾಡಲಾಗಿದೆ. ಇದು ಗರ್ಭಗೃಹ, ಸಭಾಮಂಟಪ ಹೊಂದಿದ್ದು, ಇಲ್ಲಿ ಸರಳ ಶೈಲಿಯ ನಾಲ್ಕು ಕಂಬಗಳಿವೆ.[೧೬] ಇಲ್ಲಿನ ಮೂಲವಿಗ್ರಹ ಚಿಕ್ಕ ಶಿಲಾಕಂಬದಲ್ಲಿ ಇದ್ದು ಆ ಶಿಲಾಕಂಬದ ಮೇಲೆ ದೇವಿಯ ಮುಖಾಕಾರದ ರೂಪವಿದೆ. ಈ ಮೂರ್ತಿಯನ್ನು ಊರಿನ ಮಧ್ಯದಲ್ಲಿ ಪ್ರತಿಷ್ಠಾಪಿಸಲಾಗಿದೆ. ದೇವಿ ಮೂರ್ತಿಯೊಂದಿಗೆ ಪಾಳೇಗಾರ ಕಾಲದೆನ್ನಬಹುದಾದ ತಾಮ್ರದ ಅಶ್ವಪ್ರತಿಮೆ ಇದೆ. ಇದರ ನಿರ್ಮಾಣ ಮನೋಹರವಾಗಿದೆ.

ದೇಗುಲದಲ್ಲಿ ದೇವಿ, ಮೂರ್ತಿ ಜೊತೆಗೆ ಪ್ರಭಾವಳಿ, ಪಾಳೇಗಾರರ ಖಡ್ಗ, ಕತ್ತಿ, ಚಾಕು ಮುಂತಾದ ಆಯುಧಗಳು ದೇವಸ್ಥಾನದಲ್ಲಿವೆ. ಮೂಲಸ್ಥಾನದಲ್ಲಿ ಕುಂಭಕ್ಕೆ ಪೂಜೆಯಾಗುತ್ತದೆ. ಮಲೆಯಮ್ಮ ದೇವಿಯ ಬಾಗಿಲುವಾಡ ಊರಿನ ಆಂಜನೇಯನ ದೇವಸ್ಥಾನಕ್ಕೆ ಜೋಡಿಸಲಾಗಿದೆ.

ಹೆಸರು : ರುದ್ರಯ್ಯನಮಠ

ಗ್ರಾಮ : ಬೀರಲಗುಡ್ಡ

ಕಾಲಮಾನ : ೧೭ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ವಿಜಯನಗರೋತ್ತರ

ರುದ್ರಯ್ಯನ ಮಠವೆಂದು ಚಾಲ್ತಿಯಲ್ಲಿರುವ ಈ ದೇವಾಲಯ ಮೂಲತಃ ಈಶ್ವರ ದೇವಾಲಯ. ಗರ್ಭಗೃಹ, ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಯಾವುದೇ ವಿಗ್ರಹವಿಲ್ಲ, ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕರು ಲಲಾಟಬಿಂಬದಲ್ಲಿ ಗಣೇಶ ಉಬ್ಬುಶಿಲ್ಪದ ಕೆತ್ತನೆ ಇದೆ. ಸಭಾಮಂಟಪದ ನಾಲ್ಕು ಕಂಬಗಳು ಉಬ್ಬುಗೆತ್ತನೆಗಳಿಂದ ಕೂಡಿದ್ದು ಪುಷ್ಪಬೋದಿಗೆ ಹೊಂದಿವೆ.[೧೭] ಈ ತರಹದ ಪುಷ್ಪಬೋದಿಗೆ ವಿಜಯನಗರದ ಅರಸರ ಕಾಲದಲ್ಲಿ ಬಳಕೆಯಲ್ಲಿತ್ತು ಎಂಬುದು ತಿಳಿಯುತ್ತದೆ. ಇಲ್ಲಿದ್ದ ವೀರಗಲ್ಲು ಇಂದು ಕಾಣಸಿಗುವುದಿಲ್ಲ.

ಹೆಸರು : ಬಿಷ್ಟಪಯ್ಯ(ಈಶ್ವರ)

ಗ್ರಾಮ : ಬೊಪ್ಪಲಾಪುರ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಉತ್ತರ

ಶೈಲಿ : ವಿಜಯನಗರ

ಮೂಲತಃ ಈಶ್ವರ ದೇವಾಲಯವಾದ ಇದನ್ನು ಇಲ್ಲಿನ ಜನ ಬಿಷ್ಟಪಯ್ಯನ ಗುಡಿ ಎನ್ನುತ್ತಾರೆ. ವಿಜಯನಗರ ಕಾಲದ್ದು ಎನ್ನಲಾದ ಇದು ಗರ್ಭಗೃಹ, ಸಭಾಮಂಟಪ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದ ನಾಲ್ಕು ಕಂಭಗಳ ಮಧ್ಯದಲ್ಲಿ ಎತ್ತರದ ಕಟ್ಟೆಯ ಮೇಲೆ ಪ್ರತಿಷ್ಠಾಪನ ಶಿವಲಿಂಗವಿದೆ. ಶಿವಲಿಂಗದ ಮುಂಭಾಗದಲ್ಲಿ ಸಾಮಾನ್ಯ ಎನ್ನುವಂತೆ ನಂದಿಶಿಲ್ಪವಿದೆ.

ದೇಗುಲದ ಕಂಬಗಳು ವಿಜಯನಗರ ಶೈಲಿಯಲ್ಲಿದ್ದು ಚಚ್ಚೌಕ ಹಾಗೂ ಮಧ್ಯಭಾಗವನ್ನು ಬಹುಮುಖಗಳಲ್ಲಿ ಕಡೆದು ಅಲಂಕರಿಸಲಾಗಿದೆ. ಕಂಬದ ದಿಂಡುಗಳಲ್ಲಿ ಉಬ್ಬುಗೆತ್ತನೆಗಳಿವೆ. ಮುಖಮಂಟಪದ ಮೇಲ್ಭಾಗದಲ್ಲಿ ಹಂಪೆಯ ಗಾಣಗಿತ್ತಿ ಜಿನಾಲಯದಲ್ಲಿ ಇರುವಂತೆ ಕೈಪಿಡಿಗೊಂಡೇ ಅಲಂಕರಣಗೊಂಡಿದೆ.[೧೮]

ಹೆಸರು : ಪೂರ್ವದ ವೀರಭದ್ರ ದೇವಾಲಯ

ಗ್ರಾಮ : ಮೊರಬ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಉತ್ತರ

ಶೈಲಿ : ವಿಜಯನಗರ

ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪ, ಅದರ ಇಕ್ಕೆಲಗಳಲ್ಲಿ ಎರಡು ತೆರೆದು ಗರ್ಭಗೃಹ ಹಾಗೂ ಮುಖಮಂಟಪಗಳಿವೆ. ಗರ್ಭಗೃಹದಲ್ಲಿ ಐದು ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. ವೀರಭದ್ರನ ಕೈಗಳಲ್ಲಿ ಬಿಲ್ಲು-ಬಾಣ, ಕತ್ತಿ-ಗುರಾಣಿಗಳಿವೆ. ಬಲಬದಿಯ ತೆರೆದ ಗರ್ಭಗೃಹದಲ್ಲಿ ನಾಲ್ಕು ನಂದಿ ಮತ್ತು

ಎರಡು ಶಿವಲಿಂಗಗಳಿವೆ. ಜೊತೆಗೆ ವೀರಭದ್ರನ ಲೋಹದ ಪ್ರತಿಮೆ ಕೂಡ ಇದೆ. ಸಭಾಮಂಟಪ, ಮುಖಮಂಟಪದಲ್ಲಿ ವಿಜಯನಗರ ಶೈಲಿಯ ಕಂಬಗಳಿವೆ. ಗರ್ಭಗೃಹದ ಬಾಗಿಲುವಾಡವನ್ನು ಹೂ-ಬಳ್ಳಿಗಳಿಂದ ಅಲಂಕರಿಸಲಾಗಿದೆ. ಈ ಗ್ರಾಮದಲ್ಲಿ ಕ್ರಿ.ಶ. ೧೫೨೮ಕ್ಕೆ ಸೇರಿದ ಕೃಷ್ಣದೇವರಾಯನ ಶಾಸನವಿದೆ.[೧೯]

ಹೆಸರು : ದೊಡ್ಡ ವೀರಭದ್ರೇಶ್ವರ

ಗ್ರಾಮ : ಮೊರಬ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಉತ್ತರ

ಶೈಲಿ : ವಿಜಯನಗರ

ಈ ದೇಗುಲದಲ್ಲಿ ಗರ್ಭಗೃಹ, ಸಭಾಮಂಟಪ, ಗರ್ಭಗೃಹದಲ್ಲಿ ಮೂರುವರೆ ಅಡಿ ಎತ್ತರದ ವೀರಭದ್ರ ಶಿಲ್ಪವಿದೆ. ಸಭಾಮಂಟಪದಲ್ಲಿ ಚೌಕಾಕಾರದ ೪ ಕಂಬಗಳಿವೆ.[೨೦]

ಹೆಸರು : ರಾಮಲಿಂಗೇಶ್ವರ ದೇವಾಲಯ

ಗ್ರಾಮ : ಸಾಸಲವಾಡ

ಕಾಲಮಾನ : ೧೩ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ಕಲ್ಯಾಣ ಚಾಲುಕ್ಯ

ಕಣಶಿಲೆಯಿಂದ ನಿರ್ಮಾಣವಾದ ದ್ವಿಕೂಟಾಚಲ ದೇವಾಲಯವಿದು. ಎರಡು ಗರ್ಭಗೃಹಗಳು, ಸಭಾಮಂಟಪ, ದೀಪಸ್ತಂಭಗಳು ಇದರ ಮುಖ್ಯ ಭಾಗಗಳು ಗರ್ಭಗೃಹಗಳಲ್ಲಿ ಶಿವಲಿಂಗಗಳಿವೆ. ಸಭಾಮಂಟಪದಲ್ಲಿ ಎರಡು ಸರಳ ಶೈಲಿಯ ಚೌಕಾಕಾರದ ಕಂಬಗಳಿವೆ. ಗರ್ಭಗೃಹದ ಮೇಲೆ ದ್ರಾವಿಡ ಮಾದರಿಯ ಗೋಪುರವನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಸಭಾಮಂಟಪದಲ್ಲಿ ಸಪ್ತಮಾತೃಕಾಪಟ್ಟಿ, ಶಿವಲಿಂಗ ಮಹಿಷಮರ್ಧಿನಿ ಮತ್ತು ವಿಷ್ಣುಶಿಲ್ಪಗಳಿವೆ.[೨೧]

ಹೆಸರು : ಸಿದ್ದಯ್ಯನಗುಡ್ಡ ಸಿದ್ದೇಶ್ವರ

ಗ್ರಾಮ : ಕೂಡ್ಲಿಗಿ

ಕಾಲಮಾನ : ೧೮ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ವಿಜಯನಗರೋತ್ತರ

ಕೂಡ್ಲಿಯ ಹೊರಹೊಲಯದ ರಾಷ್ಟ್ರೀಯ ಹೆದ್ದಾರಿ-೧೩ರ ಪಕ್ಕದಲ್ಲಿ ಇದ್ದು, ರಸ್ತೆಯ ಎಡಬದಿಯಲ್ಲಿ ಸೊಲ್ಲಮ್ಮದೇವಿ ಆಲದ ಮರವಿದೆ. ಸಿದ್ದಯ್ಯನ ದೇವಾಲಯ ಗರ್ಭಗೃಹ, ಅಂತರಾಳ ಅದಕ್ಕೆ ಹೊಂದಿದಂತೆ ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ಸುತ್ತಲೂ ಪ್ರಕಾರಗೋಡೆ ಇದ್ದು ಅದಕ್ಕೆ

ಹೊಂದಿಕೊಂಡಂತೆ ಮಂಟಪಗಳಿವೆ. ಮುಂಭಾಗದಲ್ಲಿ ದೀಪಸ್ತಂಭವಿದೆ. ಗರ್ಭಗೃಹದಲ್ಲಿ ಶಿವಲಿಂಗ ಸಭಾಮಂಟಪದಲ್ಲಿ ನಂದಿಗಳಿವೆ. ಕಂಬ ಚಚ್ಚೌಕವಾಗಿದ್ದು, ಮಧ್ಯದಲ್ಲಿ ಬಹುಮುಖವಾಗಿವೆ. ಸಭಾಮಂಟಪದ ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ.[೨೨] ಕೂಡ್ಲಿಯ ಪ್ರಮುಖ ದೇವಾಲಯಗಳಲ್ಲಿ ಇದು ಒಂದು. ಶಿವರಾತ್ರಿ ಮತ್ತು ಕಡೆಶ್ರಾವಣದ ಸೋಮವಾರದಂದು ಕಡುಬಿನಪರ್ವ ನಡೆಯುತ್ತದೆ.

ಹೆಸರು : ಈಶ್ವರ ದೇವಾಲಯ

ಗ್ರಾಮ : ಹಿರೆಹೆಡ್ಗಾಳ

ಕಾಲಮಾನ : ೧೩ನೇ ಶತಮಾನ

ದಿಕ್ಕು : ಪೂರ್ವ

ಶೈಲಿ : ಕಲ್ಯಾಣ ಚಾಲುಕ್ಯ

ತ್ರಿಕೂಟ ಚಲವಾದ ಈ ದೇವಾಲಯವು ಮೂರು ಗರ್ಭಗೃಹಗಳು, ಸಭಾಮಂಟಪದಿಂದ ಕೂಡಿದೆ. ಗರ್ಭಗೃಹವು ಪೂರ್ವಭಾಗಕ್ಕಿದ್ದರೆ, ಸಭಾಮಂಟಪವು ದಕ್ಷಿಣಕ್ಕಿದೆ. ನಂತರ ಪೂರ್ವಭಾಗದಲ್ಲಿ ಗೋಡೆ ಕಟ್ಟಿರುವುದನ್ನು ಗಮನಿಸಬಹುದು. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ಸಭಾಮಂಟಪದಲ್ಲಿ ನಂದಿ ಶಿಲ್ಪಗಳಿವೆ. ಸಭಾಮಂಟಪದ ಕಂಬಗಳು ಕೆಳಭಾಗದಲ್ಲಿ ಚಚ್ಚೌಕ ಮೇಲ್ಭಾಗದಲ್ಲಿ ಬೋಗುಣಿ ಕಾರವನ್ನು ಹೊಂದಿವೆ. ಬೋದಿಗೆಯು ದಿಂಬಿನಾಕಾರವಾಗಿವೆ. ಕಣಶಿಲೆಯಲ್ಲಿ ನಿರ್ಮಿಸಲಾದ ಈ ದೇವಾಲಯ ಕಂಬಗಳು ಕಲ್ಯಾಣ ಚಾಲುಕ್ಯ ಶೈಲಿಯನ್ನು ಮೈಗೂಡಿಸಿಕೊಂಡಿವೆ.[೨೩]

ಈಗಾಗಲೇ ಉಕ್ತವಾಗಿರುವ ಹೋಬಳಿಯ ದೇವಾಲಯಗಳಲ್ಲದೆ ಕ್ಷೇತ್ರಕಾರ್ಯದಲ್ಲಿ ಹೊಸದಾಗಿ ಕೂಡ್ಲಿಗಿ ಪಟ್ಟಣದಲ್ಲಿನ ಎರಡು ದೇವಾಲಯವನ್ನು ಇಲ್ಲಿ ಪರಿಚಯಿಸಲಾಗಿದೆ.

ಹೆಸರು : ಕೇಶವ ದೇವಾಲಯ

ಗ್ರಾಮ : ಕೂಡ್ಲಿಗಿ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಉತ್ತರ

ಶೈಲಿ : ವಿಜಯನಗರ

ಕೂಡ್ಲಿಗಿ ಪಟ್ಟಣದ ಊರಮ್ಮದೇವಿಯ ದೇವಾಲಯದ ಮುಂಭಾಗದ ಬಲಗಡೆ ಈ ದೇಗುಲವಿದ್ದು, ಕೇಶವ ದೇವಾಲಯ ಎಂದು ಕರೆಯುತ್ತಾರೆ. ಗರ್ಭಗೃಹ ಅರ್ಧಮಂಟಪ, ಸಭಾಮಂಟಪಗಳಿಂದ ಕೂಡಿದೆ. ಸುಂದರ ಕೆತ್ತನೆಯ ಪೀಠದ ಮೇಲೆ ಕೃಷ್ಣವರ್ಣದ ಕೇಶವನ ಮೂರ್ತಿಶಿಲ್ಪವಿದ್ದು, ಹಿಂಭಾಗದಲ್ಲಿ ಏಳು ಎಡೆಯ ಆದಿಶೇಷನಿದ್ದಾನೆ. ಕೇಶವ ನಾಲ್ಕು ಬಾಹುಗಳುಳ್ಳವನಾಗಿದ್ದು, ಎರಡು ಹಸ್ತಗಳಲ್ಲಿ ಶಂಖ, ಚಕ್ರ ಹಿಡಿದಿದ್ದು, ಇನ್ನೆರಡು ಅಭಯಹಸ್ತ ವರದಮುದ್ರೆಯಿಂದ ಕೂಡಿವೆ.

ಮೂರ್ತಿಯ ಶಿರೋಭಾಗದ ಮೇರೆಯು ಲತೆಗಳಿಂದ ರಚನೆಗೊಂಡಿದ್ದು ಕೈವಲ್ಯಪುರದ ಅನಂತೇಶನ ಮುಖಾರವಿಂದವನ್ನೇ ಹೋಲುತ್ತದೆ. ಅರ್ಧಮಂಟಪದಲ್ಲಿ ೪ ಕಂಬಗಳಿದ್ದು ಪೀಠದಲ್ಲಿ ಯ್ಯಾಳಿ ಮತ್ತು ಸಿಂಹದ ಉಬ್ಬುಶಿಲ್ಪಗಳಿವೆ. ಪೀಠದ ಮೇಲ್ಭಾಗವು ಬಹುಮುಖ ಕೆತ್ತನೆಯಿಂದ ಕೂಡಿದ್ದು ಬೋದಿಗೆ ಮಧ್ಯ

ಪಟ್ಟಿಕೆಗಳಿಂದ ನಿರ್ಮಾಣಗೊಂಡಿದೆ. ಅರ್ಧಮಂಟಪದ ಎಡಭಾಗದಲ್ಲಿ ೩ ಅಡಿ ಎತ್ತರದ ವಿಶೇಷ ಏಕಶಿಲಾ ಕೆತ್ತನೆಯ ಕಲ್ಲಿನ ರಥವಿದೆ. ಸಭಾಮಂಟಪ, ಇಕ್ಕೆಲಗಳಲ್ಲಿ ಬಿತ್ತಿಗೆ ಹೊಂದಿಕೊಂಡಂತೆ ಎರಡು ಜಗಲಿಗಳಿವೆ. ಬಹುಶಃ ಸಭೆ ಸಮಾರಂಭಗಳು ನಡೆಯುತ್ತಿರಬಹುದು.

ಹೆಸರು : ಕಪಿಲೇಶ್ವರ ದೇವಸ್ಥಾನ

ಗ್ರಾಮ : ಕೂಡ್ಲಿಗಿ

ಕಾಲಮಾನ : ೧೬ನೇ ಶತಮಾನ

ದಿಕ್ಕು : ಉತ್ತರ

ಶೈಲಿ : ವಿಜಯನಗರ

ಕೂಡ್ಲಿಗಿ ಪಟ್ಟಣದ ಊರಮ್ಮದೇವಿ ದೇವಾಲಯದ ಬಯಲಿನ ಎಡಭಾಗದಲ್ಲಿ ಕಪಿಲೇಶ್ವರ ದೇವಾಲಯವಿದೆ. ಗರ್ಭಗೃಹ, ಸಭಾಮಂಟಪವಿದ್ದು, ಸಭಾಮಂಟಪದಲ್ಲಿ ತೆರೆದ ಆವರಣಕ್ಕೆ ಸುತ್ತಲೂ ಬಿತ್ತಿದೆ. ಪೂರ್ವಾಭಿಮುಖದ ದೇಗುಲ ಗ್ರಾನೈಟ್ ಶಿಲೆಯಿಂದ ರಚನೆಗೊಂಡಿದೆ. ದೇವಾಲಯದ ಗರ್ಭಗೃಹ ಆಯತಾಕಾರದಲ್ಲಿದ್ದು ಮೂರುಗರ್ಭಗೃಹ ಒಳಗೊಂಡಿದೆ. ಬಲಭಾಗದಲ್ಲಿ ಲಕ್ಷ್ಮಿವೆಂಕಟೇಶ್ವರ ಮೂರ್ತಿ ಮಧ್ಯದಲ್ಲಿ ಬಂಡೆಗಲ್ಲಿನಲ್ಲಿ ನಿರ್ಮಿಸಿದ ಆಂಜನೇಯನ ಉಬ್ಬುಶಿಲ್ಪ, ಎಡಭಾಗದ ಗರ್ಭಗೃಹದಲ್ಲಿ ಅಷ್ಟಕೋನಾಕೃತಿಯ ಶಿವಲಿಂಗ ಮೂರ್ತಿಗಳಿವೆ. ಬಾಗಿಲುವಾಡದ ಲಲಾಟಬಿಂಬದಲ್ಲಿ ಅನಂತಶಯನವಿದ್ದು, ನಾಭಿಯಿಂದ ಹೊರಟ ಕಮಲದಲ್ಲಿ ಬ್ರಹ್ಮನಿದ್ದು, ಚರಣದಲ್ಲಿ ಲಕ್ಷ್ಮೀಯು ಪಾದ ಸೇವೆಗೈಯುತ್ತಿದ್ದಾಳೆ, ಹಾಗೆ ಎರಡು ಬದಿಯಲ್ಲಿ ದೇವಕನ್ನೆಯರಿದ್ದಾರೆ. ಮೂರು ಗರ್ಭಗೃಹ ಇರುವುದರಿಂದ ತ್ರಿಕೂಟಚಲ ದೇವಾಲಯದಂತೆ ಕಂಡುಬರುತ್ತದೆ. ಮಧ್ಯದ ಗರ್ಭಗೃಹದ ಮುಂಭಾಗದಲ್ಲಿ ಪದ್ಮಪೀಠವಿದೆ. ಕಂಬಗಳ ರಚನೆ, ಪೀಠ ಭಾಗದಲ್ಲಿ ಎರಡು ಚಚ್ಚೌಕದ ಭಾಗಗಳು ಅವುಗಳ ಮಧ್ಯದಲ್ಲಿ ಅಷ್ಟಮುಖ ಹಾಗೂ ಹದಿನಾರು ಮುಖದ ಭಾಗಗಳು ಕಂಡುಬರುತ್ತವೆ. ಪಾದದಲ್ಲಿ ಯ್ಯಾಳಿ, ಸಿಂಹ, ಉಬ್ಬುಶಿಲ್ಪಗಳಿವೆ. ನಂತರ ದಂಡದಲ್ಲಿ ಕೂಡ ಅನೇಕ ದೇವತೆ, ಸ್ತ್ರೀ–ಪುರುಷ, ಪ್ರಾಣಿ, ರೇಖಾಚಿತ್ರಗಳು ಕೂಡ ಕಂಡುಬರುತ್ತವೆ. ನೋಡಲು ವಿಜಯನಗರ ಕಾಲದ್ದು ಎನಿಸಿದರೂ ಕಲ್ಯಾಣಿ ಚಾಲುಕ್ಯರ ಶೈಲಿಯ ಕಂಬದ ವಿವಿಧ ಭಾಗಗಳು ವಿಸ್ತಾರಗೊಳ್ಳುತ್ತಾ ಬಂದಿರಬಹುದು ಎಂಬುದು ತಳ್ಳಿಹಾಕುವಂತಿಲ್ಲ. ಕೂಡ್ಲಿಗಿ ಹೋಬಳಿಯು ನೊಳಂಬರು ಆಳಿದ ಭಾಗವಾಗಿದ್ದು, ನೊಳಂಬವಾಡಿ ೩೨,೦೦೦ದ ಕೋಗಳಿ–೫೦೦ ಭಾಗಕ್ಕೆ ಸೇರಿದ ಪ್ರದೇಶ ಇದಾಗಿತ್ತು.

### ಕೂಡ್ಲಿಗಿ ಕಲ್ಲಿನ ರಥಶಿಲ್ಪ

ರಥಗಳ ಕಲ್ಪನೆ ಪುರಾತನವಾದುದು, ವೇದಕಾಲದಷ್ಟು ಪ್ರಾಚೀನ ಋಗ್ವೇದದಲ್ಲಿ ರಥದ ಪ್ರಮುಖ ಅಂಗಗಳಾದ ಅಕ್ಷ(ಅಚ್ಚು, ಇರಸು), ಕೋಶ(ಒಡಲು, ಶರೀರ) ಹಾಗೂ ಚಕ್ರ ಮುಂತಾದವುಗಳ ಉಲ್ಲೇಖವಿದೆ. ಶತಪಥ ಬ್ರಾಹ್ಮಣದಲ್ಲಿ ರಥದ ಶಿರಸ್ಸಿನ ಹಾಗೂ ಅಪಸ್ಥಂಭ ಸುಲಭ ಸೂತ್ರದಲ್ಲಿ ರಥದ ಇರಸು, ಚಕ್ರ ಹಾಗೂ ಕಂಭಗಳ ಪ್ರಮಾಣ ಕುರಿತು ಹೇಳುತ್ತದೆ. ತೈತ್ತರೀಯಲ್ಲಿಯೂ ಇದರ ಉಲ್ಲೇಖವಿದೆ.

ಋಗ್ವೇದದಲ್ಲಿ ಅಶ್ವಿನಿ ದೇವತೆಗಳು ಹಾಗೂ ಸೂರ್ಯದೇವರು ಬಳಸುತ್ತಿದ್ದ ಮಾಹಿತಿ ಇದೆ. ಕಠೋಪನಿಷತ್ತಿನಲ್ಲಿ ಮಾನವನ ಶರೀರವನ್ನು ರಥಕ್ಕೆ ಹೋಲಿಸಲಾಗಿದೆ. ಆತ್ಮ, ರಥಿಕ, ಬುದ್ಧಿ, ಸಾರಥಿ, ಮನಸ್ಸು ಕಡಿವಾಣ ಹಾಗೂ ಇಂದ್ರಿಗಳೇ ರಥಕ್ಕೆ ಹೂಡಿದ ದಿವ್ಯಶ್ವಗಳಾಗಿವೆ. ಧರ್ಮೋತ್ತರ ಪುರಾಣ ಆಗಮಗಳಲ್ಲಿ ರಥಗಳ

ಕುರಿತಾದ ವಿವರಗಳಿವೆ. ಹರಪ್ಪ ನಾಗರಿಕತೆಯಿಂದ ಹಿಡಿದು ರಾಜಮಹಾರಾಜರ ಕಾಲದವರೆಗೂ ಇವುಗಳ ಬಳಕೆ ನೋಡಬಹುದು. ಕಾಲಾಂತರದಲ್ಲಿ ಉತ್ಸವಗಳಲ್ಲಿ ರಥದ ಬಳಕೆಗಳಾಗಿ ನಾವಿಂದು ನೋಡಬಹುದು. ಪರ್ಯಾಯವಾಗಿ ರಥವನ್ನು ತೇರು ಎಂದು ಕರೆಯುತ್ತೇವೆ. ಬೆಳ್ಳಿ, ಬಂಗಾರ, ಕಾಷ್ಠದ ರಥಗಳನ್ನು ಕಾಣುವುದು ಸಹಜ. ಆದರೆ ಕಲ್ಲಿನ ರಥಗಳನ್ನು ಕಾಣುವುದು ಅತಿ ಅಪರೂಪ. ಅದಕ್ಕೆ ಮೂರ್ತಿವೆತ್ತಿದಂತೆ ಹಂಪೆಯ ಕಲ್ಲಿನ ರಥ ಜಗದ್ವಿಖ್ಯಾತಿ ಪಡೆದಿರುವುದು ನಾವಿಲ್ಲಿ ಸ್ಮರಿಸಬಹುದು. ಅದಕ್ಕೆ ಮಾದರಿಯೆಂಬಂತೆ ಅಖಂಡ ಶಿಲೆಯಲ್ಲಿ ನಿರ್ಮಾಣವಾದ ಏಕಶಿಲ ಕಲ್ಲಿನರಥ ಕೂಡ್ಲಿಗಿಯ ಕೇಶವ ದೇವಾಲಯದಲ್ಲಿದೆ.

'ಬಯಲು ಆಲಯದೊಳಗೋ, ಆಲಯವು ಬಯಲೊಳಗೋ' ಎಂಬ ಕನಕದಾಸರ ವಾಣಿಯಂತೆ ತೇರು ದೇವಾಲಯದೊಳಗೋ, ದೇವಾಲಯವೇ ತೇರಿನೊಳಗೋ ಹೇಳುವುದು ಕಷ್ಟದ ಕೆಲಸ. ರಥವೆಂದರೆ ನಡೆದೇಗುಲ ಎನ್ನುತ್ತಾರೆ. ಕುಮಾರ ತಂತ್ರದಲ್ಲಿ ಎಂಟು ಬಗೆಯ ರಥ ವರ್ಗೀಕರಣದಲ್ಲಿ ಕೂಡ್ಲಿಗಿಯಲ್ಲಿರುವ ಕಲ್ಲಿನರಥ 'ಕಾಂತರಥ'ವಾಗಿದೆ. ಚೌಕ ವಿನ್ಯಾಸದಲ್ಲಿದ್ದು, ನಾಲ್ಕು ಚಕ್ರಗಳನ್ನು ಹೊಂದಿದ್ದು, ಒಂದು ಅಂತಸ್ತಿನೊಂದಿಗೆ ರಚನೆಗೊಂಡಿದೆ. ಇಂತಹ ರಥಗಳನ್ನು ಸಪ್ತಮಾತ್ರಿಕೆಯರು ಮತ್ತು ಪುರಾಣ ಪ್ರಸಿದ್ಧ ಸ್ತ್ರೀಯರು ಬಳಸುತ್ತಿದ್ದರೆಂದು ಹೇಳಲಾಗುತ್ತದೆ. ನಾಲ್ಕು ಚಕ್ರಗಳನ್ನುಳ್ಳ ರಥವನ್ನು ಶಕಟವೆಂತಲೂ ಕರೆಯುವುದುಂಟು. ಕಠೋಪನಿಷತ್ತಿನಲ್ಲಿಯ "ಶರೀರಂ ರಥಮೇವತು" ವಾಕ್ಯದ ಉಕ್ತಿ ಇದೆ. ಜಗತ್ತಿನಲ್ಲಿ ಪ್ರಪ್ರಥಮವಾಗಿ ಬ್ರಹ್ಮದೇವರು ತನ್ನ ದಿನನಿತ್ಯದ ಪೂಜೆಯ ಅಂಗವಾಗಿ ರಥೋತ್ಸವವನ್ನು ಆಚರಿಸಿದರಂತೆ. ಆದ್ದರಿಂದ ಇದು ಭೂಲೋಕದಲ್ಲಿ ಬ್ರಹ್ಮೋತ್ಸವೆಂತಲೂ ಪ್ರಚಾರವಾಯಿತಂತೆ. ಇಲ್ಲಿನ ಕಲ್ಲಿನ ತೇರು ಪ್ರಮುಖವಾಗಿ ಮೂರು ಭಾಗಗಳಾಗಿ ವಿಂಗಡಿಸಬಹುದು. ಕೆಳಭಾಗ, ಮಂಟಪಭಾಗ, ಗೋಪುರಭಾಗ. ಈ ರಥದ ಕೆಳಭಾಗ ಗಾಲಿ, ಅಚ್ಚು, ಹೊಂದಿಕೊಂಡಂತೆ ಕಾಣುತ್ತಿದ್ದು, ಎರಡು ಗಾಲಿಯ ಮಧ್ಯದ ಮುಂಭಾಗ ಸಿಂಹ, ಹೋಲುವ ಯ್ಯಾಳಿಶಿಲ್ಪ ಮುಖ ಇದ್ದು ಅಲ್ಲಲ್ಲಿ ಹೊರಚಾಚಿದ ಮೊಗ್ಗಿನಾಕಾರದ ಕೆತ್ತನೆಗಳಿವೆ. ಎರಡನೆಯದಾಗಿ ದೇವತಾ ವಿಗ್ರಹವನ್ನು ಪ್ರತಿಷ್ಠಾಪಿಸುವ ಮಂಟಪದ ಭಾಗವನ್ನು ಚಿಕ್ಕದಾಗಿ, ಚೊಕ್ಕವಾಗಿ ಕಲಾತ್ಮಕ ಎಂಬಂತೆ ಸುಂದರ ನಾಲ್ಕು ಕಂಬಗಳು ಮೂಡಿಬಂದಿವೆ. ನಾಲ್ಕು ಕಂಬದ ಮಧ್ಯದಲ್ಲಿ ತೆರದ ಆವರಣವಿದ್ದು, ಮಧ್ಯದಲ್ಲಿ ಮೂರ್ತಿ ಪ್ರತಿಷ್ಠಾಪಿಸಿದ್ದಾರೆ ಎಂಬುದು ನಿಚ್ಚಳವಾಗಿ ತೋರುವಂತಿದೆ. ಕೊನೆಯದಾಗಿ ಗೋಪುರ ಹೋಲುವ ಶಿಖರ ದ್ರಾವಿಡ ಶೈಲಿಯನ್ನು ಅನುಸರಿಸಿದ್ದು ಅದು ಚೌಕಾಕಾರದಲ್ಲಿದೆ. ಇದರ ಕೆತ್ತನೆ ಸೌಂದರ್ಯ ಪರಸ್ಪರ ಹೊಂದಾಣಿಕೆಯಿಂದ ಕೂಡಿರುವ ಅವಯವ ವಿನ್ಯಾಸ, ರಚನಾಕ್ರಮ ಹಾಗೂ ಶಿಲ್ಪಿಯ ಚಮತ್ಕಾರಿಕೆ ನೋಡಲು ಸುಂದರವೆನಿಸಿ ಕಲೋಪಾಸಕರಿಂದ ಸೈ ಎನಿಸಿಕೊಳ್ಳುತ್ತದೆ. ರಥದ ಪ್ರತಿ ಅಂಗ ವಿನ್ಯಾಸ ಕಲಾವಂತಿಕೆ ಇತ್ಯಾದಿ ಎಲ್ಲವೂ ನೋಡುಗರನ್ನು ಮುಗ್ದಗೊಳಿಸುತ್ತದೆ. ಇದರ ಕೆತ್ತನೆಯಲ್ಲಿ ತೋರಿದ ಕಲಾಚಾತುರ್ಯ ಕಲ್ಪನಾಸೃಷ್ಟಿ ಅದರ ಅಂಗರಚನೆ ಸೌಂದರ್ಯ ಅನುಭವಿಸಿಯೇ ತಿಳಿಯಬೇಕು.

## ಶಾಸನ ಮತ್ತು ವೀರಗಲ್ಲು

'ಶಾಸ್' ಎನ್ನುವ ಸಂಸ್ಕೃತ ಧಾತುವಿನಿಂದ ಶಾಸನ ಎಂಬ ಪದ ಬಂದಿದೆ. ಇದರ ಅರ್ಥ ಆಜ್ಞೆ, ಶಿಕ್ಷಿಸು, ನಿಯಂತ್ರಿಸು ಎಂಬ ಅರ್ಥಬಂದರೆ ಶಾಸನವೆಂದರೆ 'ರಾಜಾಜ್ಞೆ' ಎಂಬ ಅರ್ಥ ಇದ್ದದ್ದು ಗೊತ್ತಾಗುತ್ತದೆ. ಮುಂದೆ ಧಾರ್ಮಿಕ ಸಂಸ್ಥೆಗಳಿಗೆ ದಾನಬಿಟ್ಟು ಅದು ಶಾಶ್ವತವಾಗಿ ನಡೆಯಬೇಕೆಂಬ ಉದ್ದೇಶದಿಂದ ಬಹುಬಾಳಿಕೆ ಬರುವ ವಸ್ತುಗಳ ಮೇಲೆ ಬರೆಯಲಾದ, ಕೆತ್ತಲಾದ ಬರವಣಿಗೆಗಳ ಶಾಸನ ಎಂಬುದಾಗಿ ಕರೆಯಲ್ಪಡುತ್ತದೆ. ಇದರ ಜೊತೆಗೆ ವೀರನ ಮರಣವನ್ನು ಸತಿಹೋದ ವಿಷಯವನ್ನು ತಿಳಿಸಲು ಶಾಸನ ಹಾಕಿಸಲು

ಪ್ರಾರಂಭವಾಯಿತು. ಹೀಗೆ ರಾಜಾಜ್ಞೆಗೆ ಸೀಮಿತವಾಗಿದ್ದ ಶಾಸನ ವ್ಯಾಪ್ತಿ ಹಿಗ್ಗಿ ಇತರ ವಿಷಯಗಳನ್ನು ನಿರೂಪಿಸುವುದಕ್ಕೂ ಬಳಸಲಾಯಿತು. ಅಂತಹ ಬಳಸಿದ ವಸ್ತುಗಳಲ್ಲಿ ಲೋಹ ಮತ್ತು ಶಿಲೆಯಲ್ಲಿ ಬರೆಯಲಾದ ಬರವಣಿಗೆಯೇ ಶಾಸನವಾಗಿ ಹೊರಹೊಮ್ಮಿದೆ.[೨೪] ಆಂಗ್ಲ ಭಾಷೆಯಲ್ಲಿ ಇವುಗಳನ್ನು Inscription ಎಂದು ಹೇಳುತ್ತಾರೆ. ಶಾಸನಗಳಿಂದ ಕಾಲಗಣನೆ, ಅವು ಯಾವು, ಯಾರ ಕಾಲದಲ್ಲಿ ಹೇಗೆ ರೂಪಿಸಲ್ಪಟ್ಟಿದೆ ಎಂದು ಹಾಗೂ ಅಂದಿನ ಕಾಲಘಟ್ಟದ ಹಲವು ಕ್ಷೇತ್ರಗಳ ಮೇಲೆ ಬೆಳಕು ಚೆಲ್ಲಲು ನೆಲವಾಗುತ್ತವೆ. ಕೂಡ್ಲಿಗಿ ಹೋಬಳಿ ಇತಿಹಾಸ ತಿಳಿಯುವಲ್ಲಿ ಶಾಸನಗಳು ಈ ಅಧ್ಯಯನಕ್ಕೆ ಮೂಲ ಆಕರಗಳಾಗುತ್ತವೆ. ಇವುಗಳು ಇಲ್ಲಿನ ಸಾಂಸ್ಕೃತಿಕ ಪರಂಪರೆಯ ಮಹತ್ವ ಸಾರುವ ಸಾಧನಗಳಾಗಿವೆ. ಹಾಗೆ ಸಾಂಸ್ಕೃತಿಕ ಚರಿತ್ರೆಯನ್ನು ಪುನರ್ ರಚಿಸುವಲ್ಲಿ ಉಳಿದೆಲ್ಲಾ ಆಕರಗಳಿಗಿಂತ ಮಹತ್ವವಾದ ಅಧಿಕೃತ ದಾಖಲೆಗಳಾಗಿವೆ.

ಈಗಾಗಲೇ ಬಳ್ಳಾರಿ ಜಿಲ್ಲೆಯ ಶಾಸನಗಳ ಕುರಿತು ಕನ್ನಡ ವಿಶ್ವವಿದ್ಯಾಲಯ ಕೆಲವು ಶಾಸನ ಸಂಪುಟ ಹೊರತಂದಿದೆ. ಅದರ ಹೊರತಾಗಿಯು ಹಲವಾರು ಮಂದಿ ಶಾಸನ ಅಧ್ಯಯನ ಕಾರ್ಯ ಕೈಗೊಂಡಿದ್ದಾರೆ. ಅದರಲ್ಲಿ ಜೆ.ಎಂ. ನಾಗಯ್ಯ ಬಳ್ಳಾರಿ ಜಿಲ್ಲೆಯ ಶಾಸನಗಳ ಕುರಿತು ಉಲ್ಲೇಖ ನೀಡಿದ್ದಾರೆ. ವಿಶೇಷವಾಗಿ ವಾಸುದೇವ ಬಡಿಗೇರ ಅವರು ನಾಗಯ್ಯ ಅವರಿಗಿಂತ ಭಿನ್ನವಾಗಿ ಹೆಚ್ಚು ಸಂಶೋಧನೆಯನ್ನು ಕೈಗೊಂಡು ೨೮೪ ಉಪ ವಿಭಾಗಗಳನ್ನು ಗುರ್ತಿಸಿದ್ದಾರೆ. ಅವುಗಳೆಂದರೆ: ಬಿಕ್ಕಿಗ–೭೦, ಬಲ್ಲವಾಡಿ–೭೦, ಮುತ್ತಿಗೆ–೩೦, ಕೊಟ್ಟೂರು–೧೨, ಬೆಣ್ಣೆವೂರು–೧೨, ಹಲುವಾಗಿಲು–೧೨, ಸೋಗಿ–೧೨, ಸಂದವತ್ತಿ–೧೨, ಮಾಂಗೊಳ–೧೨, ಹಾಲ್ವೊಳ–೧೨, ಕಂಪಣ ಪೊಗೆ–೧೨, ಮೊಸಳವಾಡ–೧೨ ಮತ್ತು ಆರುಂಬಾಡಗಳು ಸೇರಿ ಒಟ್ಟು ೨೬೪ ಎಂದಿದ್ದಾರೆ. ಆದರೆ ಈ ಮೇಲಿನ ಎಲ್ಲಾ ಸಂಖ್ಯೆಗಳನ್ನು ಒಟ್ಟುಗೂಡಿಸಿದಾಗ ೨೮೪ ಆಗುತ್ತವೆ. ಹೊಸ ಸಂಶೋಧನೆಯಲ್ಲಿ ೧೨ ಎಂಬುದನ್ನು ಹೊಸದಾಗಿ ಕಂಡುಹಿಡಿಯಲಾಗಿದೆ. ಈಗಿನ ಹನಸಿ(ಹಿಂದೆ ಕೂಡ್ಲಿಗಿ ಹೋಬಳಿ ಗ್ರಾಮ) ಈ ಶಾಸನವು ದೊರೆತಿದ್ದು ಹನಸೆ–೧೨ರಲ್ಲಿ ಚಿಕ್ಕಲಬ್ಬೆಗೆರೆ ಎಂಬೊಂದು ಗ್ರಾಮವನ್ನು ಶಾಸನದಲ್ಲಿ ಹೆಸರಿಸಲಾಗಿದೆ.[೨೫]

ಒಟ್ಟಾರೆ ಕೋಗಳಿ ನಾಡಿನ ಒಟ್ಟು ಗ್ರಾಮಗಳ ಸಂಖ್ಯೆಗಳು–

| | |
|---|---|
| ಬಿಕ್ಕಿಗ–೭೦ | ಬೆಣ್ಣೆಕಲು–೧೨ |
| ಬೆಣ್ಣೆವೂರು–೧೨ | ವಸವದು–೧೨ |
| ಮಾಂಗೋಳ–೧೨ | ಮುತ್ತಿಗೆ–೩೦ |
| ಮೊಸಳೆವಾಡ–೧೨ | ಸೋಗೆ–೧೨ |
| ಸಂದವತ್ತಿ–೧೨ | ಹಲುಮಾಯಿ–೧೨ |
| ಹನಸೆ–೧೨ | ಹಾಲ್ವೊಳ–೧೨ |
| ಹಲುವಾಗಿಲು–೧೨ | ಕೊಟ್ಟೂರು–೧೨ |

**ಒಟ್ಟು ೨೪೪**

ವಾಸುದೇವ ಬಡಿಗೇರ ಹೇಳಿರುವ ಹಾಗೆ ಬಲ್ಲವಾಡಿ–೭೦ ಮತ್ತು ಆರುಂಬಾಡ ಎಂಬ ಉಪ ವಿಭಾಗಗಳನ್ನು ಗ್ರಹಿಸಿದ ಶಾಸನಗಳ ಜೊತೆಗೆ ತೆಗೆದುಕೊಂಡಲ್ಲಿ ಒಟ್ಟು ೩೨೦ ಉಪಗ್ರಾಮಗಳು ಕೋಗಳಿ ನಾಡಿನಲ್ಲಿ ಇದ್ದವೆಂದು ತೀರ್ಮಾನಿಸಬಹುದು.[೨೬] ಕೋಗಳಿ–೫೦೦ರಲ್ಲಿ ಉಳಿದ ೧೮೦ ಗ್ರಾಮಗಳಲ್ಲಿ ಕೂಡ್ಲಿಗಿ

ಗ್ರಾಮವು ಒಂದಾಗಿರಬಹುದು. ಕಾರಣ ಕೋಗಳಿ-೫೦೦ರಲ್ಲಿ, ಮೊರಬ-ಹನಸಿ, ಕೂಡ್ಲಿಗಿ ಗ್ರಾಮದ ಅತಿ ಸಮೀಪದ ಹಾಗೂ ಪ್ರಾಚೀನ ಸಾಂಸ್ಕೃತಿಕ ಒಡನಾಟಗಳಿವೆ. ಈ ಭಾಗದಲ್ಲಿ ಒಂದು ಮಾತು ಇದೆ. 'ಸೊನ್ನ ಮೊರಗೇರಿಗೆ' ಹೆಣ್ಣು ಕೊಡಬಾರದು ಹನಸಿಗೆ ಎತ್ತು ಕೊಡಬಾರದೆಂದು ಕೂಡ್ಲಿಗಿ ಭಾಗದಿಂದ ಮದುವೆಯಾಗಿ ಸೊನ್ನ ಮೊರಗೇರಿಗೆ ಹೋದರೆ ಅಲ್ಲಿ ನೀರಿನ ತೊಂದರೆ ಇದ್ದು, ಹೆಣ್ಣುಮಕ್ಕಳು ೨-೩ ಕಿ.ಮೀ.ಗಳಷ್ಟು ದೂರದಿಂದ ನೀರು ಹೊರಬೇಕಾಗುತ್ತದೆಂದು ಹಾಗೆ ಹನಸಿಕೆರೆ ವರ್ಷಪೂರ್ತಿ ತುಂಬಿರುತ್ತಿದ್ದು ಮಾಗಣಿ ನಿರಂತರವಾಗಿ ಸಾಗುತ್ತಿದ್ದರಿಂದ ಎತ್ತುಗಳು ಉಳುಮೆ ಮಾಡಿ ಮಾಡಿ ಬಳಲುತ್ತವೆಂದು ಈ ಗಾದೆ ಪ್ರಾಚೀನ ಕಾಲದಿಂದ ರೂಢಿಯಲ್ಲಿದೆ. ಹೀಗಾಗಿ ಶಾಸನ ಉಲ್ಲೇಖಿತ ಸೊನ್ನ ಮೊರಗೇರೆ, ಹನಸಿ, ಮೊರಬ, ಕೂಡ್ಲಿಗಿಯೊಂದಿಗೆ ಸಂಪರ್ಕದಲ್ಲಿದ್ದವು ಎಂಬುದು ಈ ಗಾದೆಗಳಿಂದ ತಿಳಿಯುತ್ತದೆ. ಇನ್ನು ಹೆಚ್ಚಿನ ಅಧ್ಯಯನ ಆಗಬೇಕಿದೆ. ಕೂಡ್ಲಿಗಿ ಹೋಬಳಿಗೆ ಸಂಬಂಧಿಸಿದಂತೆ ಕೆಲವು ಶಾಸನಗಳನ್ನು ಸಂಕ್ಷಿಪ್ತ ವಿವರವನ್ನು ನೀಡಲು ಪ್ರಯತ್ನಿಸುತ್ತಿದ್ದೇನೆ.

**ಅಮ್ಮನಕೆರೆ ಸಂ-೪೬೩**

ಬೀದಿಯಲ್ಲಿನ ಕಟ್ಟೆಯ ಮೇಲೆ ನಿಲ್ಲಿಸಿದ ಕಲ್ಲಿನ ಮೇಲೆ ಪ್ರಾಚೀನ ಅಕ್ಷರಗಳು ವಟ್ಟೆಳುತ್ತುವಿನಂತೆ ಕಾಣುತ್ತವೆ.[೩೭] ಹಾಗೆ ಈ ಕಲ್ಲಿನಲ್ಲಿ ಇರುವ ಅಕ್ಷರ ಶೈಲಿಯು ಮೊರಬದ ಅಗಸಿಬಾಗಿಲಲ್ಲಿ ಇರುವ ಅಕ್ಷರ ಶೈಲಿಯನ್ನೇ ಹೋಲುತ್ತವೆ. ಇವು ಓದುವ ಕಾರ್ಯ ಆಗಬೇಕಿದೆ.

**ಮೊರಬ**

ಗ್ರಾಮದ ಹೊಲವೊಂದರಲ್ಲಿ ನೆಟ್ಟಿರುವ ಶಾಸನ ಇದರ ವಿವರ ಹೀಗಿದೆ. ಶಾಲಿವಾಹನ ಶಕ ೧೪೫೦ನೇ ಸರ್ವಧಾರಿ ಶ್ರಾವಣ ಶುಕ್ರವಾರ ೧೫ಕ್ಕೆ ಸರಿಯಾದ ಕ್ರಿ.ಶ. ೩೧.೦೭.೧೫೨೮ ಶುಕ್ರವಾರದಂದು ಕೃಷ್ಣದೇವರಾಯನು ಆಳುತ್ತಿದ್ದಾಗ ಯಲಬುರ್ಗಿಯ ಮಲ್ಲಪಣ್ಣನು ಮೊರಬದಲ್ಲಿ ತನ್ನ ತಾಯಿ ವೀರಮ್ಮನಿಗೆ ಪುಣ್ಯವಾಗಬೇಕೆಂದು ಮಲಪುರದಲ್ಲಿ ಅಂಗಡಿಯನ್ನು ಕಟ್ಟಿಸಿ ಸಂತೆಯ ವಸಿಗೆಯನ್ನು ಸ್ವಲ್ಪ ಭೂಮಿಯನ್ನು ಸೂರ್ಯನಾರಾಯಣ ದೇವರಿಗೆ ದಾನ ಬಿಡುತ್ತಾನೆ.[೩೮]

**ಮೊರಬದ ಮತ್ತೊಂದು ಶಾಸನ**

ಗ್ರಾಮದ ಬೀದಿಯಲ್ಲಿ ನಿಲ್ಲಿಸಿದ ಕಲ್ಲಿನ ಮೇಲೆ ಪ್ರಾಚೀನ-ಶಾಸನ ಸಂ. ೪೬೩ರಂತೆಯೇ ಇದೆ.[೩೯]

**ಕೊಟ್ಟೂರಿನ ಕಲ್ಲೇಶ್ವರ ದೇವಾಲಯ ಶಾಸನ**

ನೊಳಂಬವಾಡಿಯ ಕೆಲವು ಗ್ರಾಮಗಳನ್ನು ಉಲ್ಲೇಖಿಸುವ ಮಹತ್ವ ಶಾಸನ ಇದಾಗಿದೆ. ಕೂಡ್ಲಿಗಿ ಹೋಬಳಿಯ ಮೊರಬ ಗ್ರಾಮ ಉಲ್ಲೇಖವಿದೆ. ಚಾಲುಕ್ಯ ವಿಕ್ರಮಾದಿತ್ಯನು ಕಲ್ಯಾಣದಿಂದ ಆಳುತ್ತಿದ್ದಾಗ ಅವನ ಸಾಮಂತ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ ೩೨,೦೦೦ವನ್ನು ಆಳುತ್ತಿದ್ದಾಗ ಘಟ್ಟಿದೇವನ ಮಾಂಡಳಿಕ ಜಗದಳನು ಕೊಟ್ಟೂರಿನ ರಾಮದೇಶ್ವರ ದೇವರಿಗೆ ದಾನ ನೀಡುತ್ತಾನೆ. ಶಾಸನದ ಮೇಲ್ಭಾಗದ ಬರವಣಿಗೆಯಲ್ಲಿ ಕೊಟ್ಟೂರು ಕಿರಿಯ ಕೊಟ್ಟೂರು ಹರಪನಹಾಳು, ನಾಗನೂರು, ಮರೆಯಾರು(ಮರೂರು) ನೆಳಲಿಕೆರೆ, ತೆಗಡಿಯಹಳ್ಳಿ, ಮಾವಿನಹೊಗೆ, ಹಿಟ್ಟಿಯಗೋತನಹಳ್ಳಿ ಚಿಕ್ಕ ಮೊರಬ ಈ ಊರುಗಳಲ್ಲಿ ಬರುವ ನೂರು ಹೇರಿಗೆ ಎರಡು ಬಂಡಿ ೫ ಒಂದು ಹತ್ತಿಯ ಕಟ್ಟನ್ನು ದೇವರಿಗೆ ತಿಕಿಮಯ್ಯ ಗೊಯ್ದಣ, ಬಿದ್ದಣಗಳು ದಾನಬಿಟ್ಟರು.[೪೦]

**ದೇವಲಾಪುರ(ಬಡೇಲಡಕು ಗ್ರಾಮ ಬಳಿ)**

ಶಿಥಿಲವಾದ ವಸಂತ ಮಲ್ಲಿಕಾರ್ಜುನ ದೇವಸ್ಥಾನದ ಮುಂದೆ ಬಿದ್ದಿರುವ ಒಡೆದ ಕಂಬದ ಮೇಲೆ ವಿಜಯನಗರ ಸದಾಶಿವದೇವ, ಮಹಾರಾಯ ಶಕ ೧೪೭೪ ವಿರೋಧಿಕೃತ ಪುಷ್ಯ ಬ. ೩೦, ಸೋಮವಾರ ಕ್ರಿ.ಶ. ೧೫೫೨, ಜನವರಿ ೨೫ ಸೋಮವಾರ, ಶಾಸನ ಕನ್ನಡ- ಬಯಪ್ಪ-ನಾಯಕನ ಮಗ ಕೃಷ್ಣಪ್ಪನಾಯಕನ ಕಾರ್ಯಕರ್ತನು ಮತ್ತು ವೇಲೂರಿನ ತಿಮ್ಮಪ್ಪ- ನಾಯಕನ ಮಗನಾದ ರಾಮಪ್ಪ-ನಾಯಕನು ದೇವಲಾಪುರದ ವಸಂತ- ಮಲ್ಲಿಕಾರ್ಜುನ ದೇವರಿಗೆ ಪೆನ್ನುಲ- ಸುಂಕನಹಳ್ಳಿಯನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಈ ಗ್ರಾಮವನ್ನು ಕೋನಯ್ಯ ರಾವುತನ ಮಗ ಮುಖವೇಣಿಯ ಮುಸಿಯ-ರಾವುತನು ದೇವಸ್ಥಾನದಲ್ಲಿ ೨ ನಾಗಸ್ವರ ಮತ್ತು ಎರಡು ಡೋಲುಗಳನ್ನು ನುಡಿಸುವುದಕ್ಕೆ ಅನುಭೋಗಿಸುವುದೆಂದು ತಿಳಿಸುತ್ತದೆ. ಈ ಶಾಸನವನ್ನು ಕೆತ್ತಿದ ಅಕ್ಕಸಾಲಿಗ ಸಿರಿಯಣ್ಣನಿಗೆ ಗ್ರಾಮದಲ್ಲಿ ಒಂದು ಮಾನ್ಯದ ಭೂಮಿಯನ್ನು ದಾನ ನೀಡಲಾಯಿತು.[೩೧]

**ಕೂಡ್ಲಿಗಿಯ ಮಾಹಿತಿ ನೀಡುವ ಗುಡೇಕೋಟೆ ಶಾಸನ**

ಇದರಲ್ಲಿ ಕೂಡ್ಲಿಗಿ ನಾಮವನ್ನು ಉಲ್ಲೇಖಿಸಿ ಹೇಳುವ ಶಾಸನ ಆದರೂ ಇದರಲ್ಲಿ ಮಾಹಿತಿ ಅಸ್ಪಷ್ಟವಾಗಿ ಇರದಿದ್ದರೂ ಅಕ್ಷರ ಅಲ್ಲಲ್ಲಿ ಹೋಗಿ ಕೂಡಲಗಿ, ಕೂಡಿಗಿ ಎಂಬ ಹೆಸರು ಉಲ್ಲೇಖಿಸಿದೆ. ಇದುವರೆಗೆ ದೊರೆತ ಏಕೈಕ ಶಾಸನ ಅದು ಹೀಗಿದೆ.

........... ಮೊದಲ ಸಾಲು

ಮಣನ ........... ಮಿ .....

ಕೂಡಲಿಗೆಯ ..... ಜ ...........

ಶಿರುವೈಯ ಮಗ ...........

ಕಟ್ಟಿದ ದೇವರ ...........

ಎಂಬ ಅಕ್ಷರಗಳೊಂದಿಗೆ ಅಷ್ಟಷ್ಟು ಮಾಹಿತಿ ನೀಡುತ್ತದೆ.

**ರಾಮೇಶ್ವರ ದೇವಾಲಯದ ಶಾಸನ**

ಚಾಲುಕ್ಯ ವಿಕ್ರಮವರ್ಷ ೩೫ ಶ್ರಾವಣ, ಶು-೫, ಸೋಮವಾರಕ್ಕೆ ಸರಿಯಾದ ಕ್ರಿ.ಶ. ೧೨, ೧೭, ೧೧೧೧ ಸೋಮವಾರ, ಚಾಲುಕ್ಯ ತ್ರಿಭುವನಮಲ್ಲನ ಸಾಮಂತನಾದ ಪಾಂಡ್ಯದೇವನು ನೊಳಂಬವಾಡಿ-೩೨,೦೦೦ವನ್ನು ಆಳುತ್ತಿದ್ದಾಗ ಇವನ ಸಾಮಂತನಾದ ಹೊಳ್ಳೆಯನು ಕೋಗಳಿ-೫೦೦ರ ಹನಸೆಯ ಪರಮೇಶ್ವರ ದೇವರಿಗೆ ಚಿಕ್ಕಲಬ್ಬೆಗೆರೆಯನ್ನು ಸೋಮಕರ್ತ್ಥರ ಪಂಡಿತರೆ ಕಾಲನ್ನು ತೊಳೆದು ದಾನ ನೀಡುತ್ತಾನೆ. ಈ ಶಾಸನವನ್ನು ಬರೆದವನು ಸೇನಬೋವ ಸೋಮನಾಥಯ್ಯ, ಶಾಸನ ಕೆತ್ತಿದವನು ಕೆಂಚಗಾರ ದಾಸೋಜ.[೩೨]

**ಮೊರಗೇರಿ**

ಇದು ಚಾಲುಕ್ಯ ಅರಸ ತ್ರೈಲೋಕ್ಯಮಲ್ಲನ ಕಾಲದ ಶಾಸನ. ಶಕವರ್ಷ ೯೬೭ನೆಯ ಪಾರ್ಥಿವ ಕಾರ್ತಿಕ ಹುಣ್ಣಿಮೆ ಬೃಹಸ್ಪತಿವಾರ ಸೋಮಗ್ರಹಣ ಸಂಕ್ರಾಂತಿ ವ್ಯತೀಪಾತಕ್ಕೆ ಸರಿಯಾದ ಕ್ರಿ.ಶ. ೨೮.೧೦.೧೦೪೫ರ ಸೋಮವಾರ ಚಂದ್ರಗ್ರಹಣದಂದು ಚಾಲುಕ್ಯ ತ್ರೈಲೋಕ್ಯದಲ್ಲಿ ಆಹವಮಲ್ಲ ದೇವನು ರಾಜ್ಯಭಾರ ಮಾಡುತ್ತಿದ್ದಾಗ

ಇವನ ಸಾಮಂತ ನೊಳಂಬ ಘಟಿಯಂಕಕಾರನ ಮಗ ಉದಯಾದಿತ್ಯ. ಇವನ ಮಗ ಜಗದೇಕಮಲ್ಲ ಇಮ್ಮಡಿನೊಳಂಬ. ಇವನ ತಮ್ಮ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಯು ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಳಿಗೆ-೧೦೦೦, ಕುದಿಯಹರವಿ-೭೦, ಕರವಿಡಿ-೭೦ ಮತ್ತು ನೊಳಂಬವಾಡಿ ೩೨,೦೦೦ವನ್ನು ಆಳುತ್ತಿರುವ ದಂಡನಾಯಕ ತಿಕಣ್ಣ ಪ್ರಮುಖವಾಗಿ ತಿಂಕಸಾಸಿರ್ವರು. ಅಮ್ಮಳೆ, ನೆಲ್ಲಿಕದಿರು, ಸೊನ್ನ ಪೊಳಲುಂದೆ ಸೂಗೂರು, ಮೋರೆಂಗೆರೆ ಮೊದಲಾದ ಆರು ಗ್ರಾಮಗಳನ್ನು ಆಳುತ್ತಿರಲು ಎಂಬ ಉಲ್ಲೇಖ ಬರುತ್ತದೆ. ಈ ಕೆಲವು ಗ್ರಾಮ ಕೂಡ್ಲಿಗಿ ಹೋಬಳಿಗೆ ಹೊಂದಿಕೊಂಡ ಶಾಸನ ಉಲ್ಲೇಖಿತ ಗ್ರಾಮಗಳಾಗಿವೆ.[೩೩]

### ಹೊಸ ಶೋಧನೆಯ ಶಾಸನಗಳು

ಕೂಡ್ಲಿಗಿ ಹೋಬಳಿ ಪರಿಸರಕ್ಕೆ ಹೊಂದಿಕೊಂಡಂತೆ ಹೋಬಳಿಯ ಕೆಲ ಗ್ರಾಮಗಳಲ್ಲಿ ಹೊಸ ಶಾಸನ ಪತ್ತೆ ಹಚ್ಚಲಾಗಿದೆ, ಇವು ಅಪ್ರಕಟಿತ ಶಾಸನಗಳಾಗಿವೆ. ಅವುಗಳೆಂದರೆ: ಕೂಡ್ಲಿಗಿ, ಶಿವಪುರ ಮತ್ತು ವಿರುಪಾಪುರ. ಅಪ್ರಕಟಿತ ಶಾಸನಗಳು ಕೂಡ್ಲಿಗಿಯ ಕೊರ್‌ಖಣ(ಚಕ್ಕೆಗುಂಡಿ)ದ ಶ್ರೀಶೈಲ ವಿದ್ಯಾಪೀಠ ಶಾಲೆಯ ಹತ್ತಿರ ಒಂದು ಬೃಹತ್ ವೃತ್ತಾಕಾರದ ಬಂಡೆಯ ಮೇಲೆ ಈ ತರದ ಅಕ್ಷರಗಳಿವೆ. ಮೇಲೆ ಸೂರ್ಯ, ಚಂದ್ರರ ಚಿಹ್ನೆಗಳಿವೆ.

### ಶಿವಪುರ

ಈ ಗ್ರಾಮದ ಬಸಾಪುರದವರ ಬಾವಿ ಹತ್ತಿರ ಗ್ರಾನೈಟ್ ಬಂಡೆಗಲ್ಲಿನ ಮೇಲೆ ಓದಬಹುದಾದ ಸ್ಪಷ್ಟ ಅಕ್ಷರವಿರುವ ೩ ಅಡಿ ಎತ್ತರ ಬಂಡೆಯಲ್ಲಿ ಕೆತ್ತಲಾಗಿದೆ. ಮೇಲೆ ಸೂರ್ಯ, ಚಂದ್ರ, ಶಿವಲಿಂಗವಿದ್ದು, ಸುಮಾರು ಹತ್ತು, ಹನ್ನೊಂದು ಸಾಲುಗಳ ನಡುಗನ್ನಡ ಎನ್ನಬಹುದಾದ ಬರಹದ ಶೈಲಿಯಿದೆ. ಇದು ಓದಬಹುದಾದ ಶಾಸನವಾಗಿದ್ದು, ಇದರ ಮೇಲೆ ಹೆಚ್ಚಿನ ಬೆಳಕು ಚೆಲ್ಲಬೇಕಿದೆ.

### ವಿರುಪಾಪುರ

ಕೂಡ್ಲಿಗಿಯ ಅಮ್ಮನಕೆರೆ ಮತ್ತು ಮೊರಬದ ಮುಂದೆ ಬರುವ ಗ್ರಾಮವೇ ವಿರುಪಾಪುರ. ಗ್ರಾಮದ ವೀರಗಾರ ದೇವರ ಅಗಸಿ ಬಾಗಿಲಲ್ಲಿ ಗ್ರಾನೈಟ್ ಬಂಡೆಗಲ್ಲಿನಲ್ಲಿ ಕೆತ್ತಲಾಗಿದ್ದು, ಅದಕ್ಕೆ ತೈಲ ಎರೆದು ಅಲ್ಲಲ್ಲಿ ಜಿಡ್ಡು ತುಂಬಿದೆ. ಅದನ್ನು ಸ್ಪಷ್ಟಪಡಿಸಿ ಓದುವುದಾದರೆ ಅದರಲ್ಲಿ ಇರುವ ವಿಷಯ ಅರಿಯಬಹುದು. ಇದರ ಮೇಲೆಯೂ ಹೆಚ್ಚಿನ ಬೆಳಕು ಚೆಲ್ಲಬೇಕಿದೆ. ಒಟ್ಟಾರೆಯಾಗಿ ಹೋಬಳಿಯ ಪರಿಸರದಲ್ಲಿ ಹೆಚ್ಚು ಹೆಚ್ಚು ಶೋಧನಾಕಾರ್ಯ ಆಗಬೇಕಿರುವುದು ಈ ಹೊಸ ಅನ್ವೇಷಣೆಗಳಿಂದ ತಿಳಿದುಬರುತ್ತವೆ.

### ವೀರಗಲ್ಲು

ಸ್ಮಾರಕಗಳು ಸತ್ತ ವ್ಯಕ್ತಿಯ ನೆನಪನ್ನುಂಟು ಮಾಡಲು ಇರುವ ಸಂಕೇತಗಳು ಮೃತವ್ಯಕ್ತಿಯ ನೆನಪನ್ನು ಘನೀಭವಿಸಿ ಅಭಿವ್ಯಕ್ತಿಗೊಳಿಸುವ ಸಾಧನಗಳು. ಆಯಾ ವರ್ಗಕ್ಕನುಗುಣವಾಗಿ ಮಾಡಿಕೊಂಡ ನಿದಿಷ್ಟವಾದ

ಸಂಕೇತಗಳಾಗಿದ್ದವು, ಅಂತವರನ್ನು ವೀರರೆನ್ನುವರು. ಈ ವೀರರನ್ನು ೨ ರೀತಿಯಲ್ಲಿ ಹೋರಾಡಿ ಪ್ರಾಣತೆತ್ತ ಅಂಶಗಳು ಕಂಡುಬರುತ್ತವೆ.

೧. ಹೋರಾಟದಲ್ಲಿ ಅರಸನ ಪರವಾಗಿಯೇ ಊರಿನ ಹಿತರಕ್ಷಣೆಗಾಗಿಯೇ ಶತ್ರುವಿನಿಂದ ಮಡಿದ ವೀರರ ಸ್ಮಾರಕ ಶಿಲೆಗಳ ರೂಪದಲ್ಲಿ ಕಾಣಬಹುದು.

೨. ಅರಸನ ಪರವಾಗಿಯೋ ಊರಿನ ಹಿತದೃಷ್ಟಿಯಿಂದಲೋ, ವೈಯಕ್ತಿಕ ಮೋಕ್ಷಪೇಕ್ಷೆಯ ದೃಷ್ಟಿಯಿಂದಲೋ ಹಿಂಸ್ಮಾತ್ಮಕವಾದ ರೀತಿಯಲ್ಲಿ ಆತ್ಮಬಲಿಯನ್ನು ಮಾಡಿಕೊಂಡು ಮಡಿದ ವೀರರ ಶಿಲಾ ಸ್ಮಾರಕ ರೀತಿಯಲ್ಲಿ ಕಾಣಬಹುದು.[೩೪]

ದಿಟ್ಟತನವನ್ನು ಧಾರ್ಮಿಕ ಅಥವಾ ಸಾಮಾಜಿಕ ಕಾರಣಗಳಿಗಾಗಿ ತಮ್ಮ ತಮ್ಮ ಬಲಿದಾನವನ್ನು ಮಾಡಿದ ವೀರರನ್ನು ಗುರ್ತಿಸಬಹುದು. ಯುದ್ಧ ತುರುಗಾಳಗ ಮುಂತಾದ ಹೋರಾಟದಲ್ಲಿ ಮಡಿದ ವೀರರಿಗೆ ನಿರ್ಮಿಸಿರುವ ಹಾಗೆ ಈ ರೀತಿ ಮಡಿದ ವೀರರಿಗೂ ವೀರಗಲ್ಲುಗಳನ್ನು ಹಾಕಿ, ಗುಡಿಗಳನ್ನು ನಿರ್ಮಿಸಿದ್ದಾರೆ. ಅವುಗಳನ್ನು 'ವೀರರ ಗುಡಿಗಳು' 'ವೀರಗುಡ್ಡಮುಲು' ಎಂಬುದಾಗಿ ಕರೆಯುತ್ತಾರೆ. ವೀರರ ಗುಡಿಯಲ್ಲಿ ಸ್ಮಾರಕವನ್ನು ಪಡೆದಿರುವ ವ್ಯಕ್ತಿಯನ್ನು ಜನ 'ಇಂದಿಗೂ 'ವೀರಗಾರರು' ಈರಗಾರರು ಎಂದು ಕರೆಯುವುದನ್ನು ನಾವು ಬಳ್ಳಾರಿ, ಕೋಲಾರ, ಬೆಂಗಳೂರು, ಚಿತ್ರದುರ್ಗ, ತುಮಕೂರು ಜಿಲ್ಲೆಗಳಲ್ಲಿ ಕಾಣಬಹುದಾದರೆ.[೩೫] ಕೂಡ್ಲಿಗಿ ತಾಲ್ಲೂಕು ಮತ್ತು ಹೋಬಳಿಗಳು ಈ ವೀರಗಲ್ಲುಗಳಿಗೆ ಮತ್ತೊಂದು ನಿದರ್ಶದಂತಿವೆ. ಕೂಡ್ಲಿಗಿ ತಾಲ್ಲೂಕು ಬಹುಸಂಖ್ಯಾತ ಬೇಡ ಅಥವಾ ನಾಯಕ ಜನಾಂಗವೇ ಕಂಡುಬರುತ್ತಾರೆ. ಕೂಡ್ಲಿಗಿ ವಿಧಾನಸಭಾಕ್ಷೇತ್ರ ಪರಿಶಿಷ್ಟ ಪಂಗಡ(ನಾಯಕ ಜನಾಂಗ) ಮೀಸಲು ಕ್ಷೇತ್ರವಾಗಿರಲು ಇದು ಕೂಡ ಕಾರಣ. ಕೂಡ್ಲಿಗಿ ಪಟ್ಟಣ ಒಂದರಲ್ಲೇ ೩೦ ಸಾವಿರ ಜನಸಂಖ್ಯೆಯಲ್ಲಿ ೧೯ ಸಾವಿರ ಜನಸಂಖ್ಯೆಯಷ್ಟು ನಾಯಕ ಜನಾಂಗವೇ ಇದೆ. ಈ ನಾಯಕ ಜನಾಂಗವು ಮೊದಲಿನಿಂದಲೂ ದಂಡಿನ ಉಳಿಗಕ್ಕಾಗಿ ಮೀಸಲಾಗಿದ್ದ ಕ್ಷಾತ್ರವೃತ್ತಿಯ ವೀರಜನಾಂಗ, ಈ ಜನಾಂಗದವರು ಕರ್ನಾಟಕದ ವಿಶಾಲ ಪ್ರದೇಶದಲ್ಲಿಯೂ ಆಂಧ್ರ ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿಯೂ ನೆಲೆಸಿದ್ದಾರೆ.[೩೬]

ಇವರ ಇತಿಹಾಸ ೧೨–೧೩ನೇ ಶತಮಾನದ ಹಿಂದಿನ ಕಾಲದವರೆಗೆ ಹೋಗುವುದು. ಬೇಡರೆಂದರೆ ಕರ್ನಾಟಕದ ರಜಪೂತರು ತಾವು ರಾಜಪುತ್ರರು ಎಂದರೆ ಅರಸನ ಮಕ್ಕಳು ಎಂದು ಹೇಳಿಕೊಳ್ಳುವಂತೆ ಈ ಬೇಡರು ತಾವು ದೊರೆಯ ಮಕ್ಕಳು, ನಾಯಕರ ಮಕ್ಕಳು, ಇಲ್ಲವೆ ಕನ್ನಯ್ಯನವರು ಎಂದರೆ ಶ್ರೀಕೃಷ್ಣನ(ಪಶುಪಾಲಕರು), ಪರಿವಾರದವರು ಎಂಬುದಾಗಿ ಗೌರವದಿಂದ ಕರೆಯಿಸಿಕೊಳ್ಳುವರು. ಇವರು ಆರಾಧಿಸುವ ವೀರರಲ್ಲಿ ಕುಮಾರರಾಮ ಪ್ರಮುಖ ಕುಮಾರರಾಮನು ತಮ್ಮ ಕುಲದೈವ ಎಂಬುದಾಗಿ ಅವನನ್ನು ಆರಾಧಿಸುತ್ತಾರೆ. ಇಂತವು ಬಳ್ಳಾರಿ ಜಿಲ್ಲೆಯ ಗಂಗಾವತಿ ರಾಮದುರ್ಗದಲ್ಲಿವೆ. ಕುಮಾರರಾಮನ ವಂಶಜರು ಎಂದು ಹೇಳಿಕೊಳ್ಳುವ ಜರಿಮಲೆ, ಗುಡೇಕೋಟೆ ಪಾಳೇಗಾರರು ಕಾಲದ ವೀರರು ಪ್ರತಿ ಗ್ರಾಮಗಳಲ್ಲಿ ಇದ್ದರು ಎಂಬುದಕ್ಕೆ ಕೂಡ್ಲಿಗಿ ತಾಲ್ಲೂಕಿನಲ್ಲಿ ಸಿಗುವ ವೀರಗಲ್ಲು ಮತ್ತು ಮಹಾಸತಿಗಲ್ಲುಗಳು ಇದಕ್ಕೆ ಸಾಕ್ಷಿಯಾಗಿವೆ. ಅದರಲ್ಲಿ ಕೂಡ್ಲಿಗಿ ಹೋಬಳಿಯ ಕೂಡ್ಲಿಗಿ ಮೊರಬ, ಬೀರಲಗುಡ್ಡ, ದೇವಲಾಪುರ, ಅಮ್ಮನಕೆರೆ, ಕಕ್ಕುಪ್ಪಿಗಳಲ್ಲದೆ, ಶಿವಪುರ, ವಿರುಪಾಪುರ ಹೆಚ್ಚಿನ ವೀರಗಲ್ಲು ಚಲ್ಲಾಡಿರುವುದು ಕಂಡುಬರುತ್ತದೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ಬಹುಸಂಖ್ಯೆಯ ವೀರಗಲ್ಲು ದೊರೆಯುತ್ತವೆ. ಅದರಲ್ಲೂ ಕೂಡ್ಲಿಗಿ ಹೋಬಳಿಯ ವಿರುಪಾಪುರದಲ್ಲಿ ೨

ಪ್ರತ್ಯೇಕ ದೇವಸ್ಥಾನಗಳಲ್ಲಿ ನಿರ್ಮಿಸಲಾಗಿದೆ. ಈ ಮೂರ್ತಿಗಳನ್ನು 'ಈರಗಾರ' ದೇವರು ಎಂಬುದಾಗಿ ಸ್ಥಳೀಯರು ಪೂಜೆಗೈಯುತ್ತಾರೆ, ಹಾಗೆ ಶಿವಪುರದ ಬೆಳ್ನಾಡುನಲ್ಲಿ ವೀರಗಲ್ಲು ಕಾಣಸಿಗುತ್ತವೆ. ಈ ತರಹದ ವೀರಗಲ್ಲು ಹೋಬಳಿಯ ಅನೇಕ ಗ್ರಾಮದಲ್ಲಿ ಏಕಹಂತದ, ದ್ವಿಹಂತದ, ತೃತೀಯಹಂತದ, ನಾಲ್ಕನೇ ಹಂತದ ವೀರಗಲ್ಲು ಕಂಡುಬರುವುದು ವಿಶೇಷ. ಪ್ರತಿ ವೀರಗಲ್ಲು ಒಂದೊಂದು ವಿಶೇಷ ಒಳಗೊಂಡಿವೆ. ಈ ತಾಲ್ಲೂಕು ವೀರರ ತಾಲ್ಲೂಕು ಎಂದು ಅತಿಶಯೋಕ್ತಿಯಲ್ಲ, ವೀರರ ಕುರಿತು ದುರ್ಗಸಿಂಹನ ಪಂಚತಂತ್ರದಲ್ಲಿ ಶ್ಲೋಕವೊಂದು ಹೀಗೆ ಹೇಳುತ್ತಾರೆ.[೩೬]

ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನಿ ಕಾಯೇ ಕಾಚಿಂತಾ ಮರಣೇ ರಣೇ ||[೩೭]

ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣಬಿಡುವುದು ಎರಡಕ್ಕೂ ಸಮಾನವಾದ ಗೌರವವಿದೆ.

**ಹೋಬಳಿಯ ವೀರಗಲ್ಲುಗಳಿರುವ ಮಾಹಿತಿ**

| **ಗ್ರಾಮ** | **ಸ್ಥಳ** | **ಹಂತ** | **ಶಿಲೆರೂಪ** |
|---|---|---|---|
| ಕೂಡ್ಲಿಗಿ | ರಾಮಲಿಂಗೇಶ್ವರ ದೇವಸ್ಥಾನ | ಎರಡು | ಕಪ್ಪುಶಿಲೆಯ ವೀರಗಲ್ಲು |
| ಮೊರಬ | ಸಣ್ಣ ವೀರಭದ್ರೇಶ್ವರ ದೇವಸ್ಥಾನ | ಎರಡು | ಬಿಳಿ ಕಂದು ಶಿಲೆಯ ವೀರಗಲ್ಲು |
| ಕೂಡ್ಲಿಗಿ | ಸ್ಮಶಾನದ ರಸ್ತೆಯ ಬಲಭಾಗದಲ್ಲಿ | ಏಕಹಂತದ ೨ ವೀರಗಲ್ಲು | ಗ್ರಾನೈಟ್ ಶಿಲೆಯ ೨ ವೀರಗಲ್ಲು |
| ಬೀರಲಗುಡ್ಡ | ರುದ್ರಯ್ಯನ ಮಠದ ಹತ್ತಿರ | ಏಕಹಂತ | ಗ್ರಾನೈಟ್ ಶಿಲೆ |
| ಅಮ್ಮನಕೇರಿ | ಬಸವಣ್ಣ ಹೊರ ದೇವಸ್ಥಾನದ ಪೂರ್ವಭಾಗ | ಏಕಹಂತ | ಗ್ರಾನೈಟ್ ಶಿಲೆ |
| ಶಿವಪುರ | ಬೆಳ್ನಾಡು | ಏಕಹಂತದ ೩-೪ ವೀರಗಲ್ಲು | ಕಪ್ಪು ಮತ್ತು ಬಿಳಿ ಗ್ರಾನೈಟ್ |
| | ಶಿವಪುರದ ಆದಿಮನಿ ವೀರಮನ ಹೊಲ | ಏಕಹಂತ ಕೆತ್ತನೆ | ಕಪ್ಪುಶಿಲೆಯ ಮೂರು ಕಲ್ಲುಗಳು |

ಹೀಗೆ ಹೋಬಳಿ ಪರಿಸರದಲ್ಲಿ ವೀರಗಲ್ಲುಗಳು ಹೆಚ್ಚಾಗಿ ಕಂಡುಬರುವುದು ಇಲ್ಲಿನ ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚು ಸಹಕಾರಿಯಾಗಿವೆ.

**ಕೋಟೆ**

ಕೋಟೆ ಎಂದರೆ ಆವರಣವುಳ್ಳ ಪ್ರದೇಶ ಎಂದರ್ಥ. ಕೋಟೆ ಅಥವಾ ರಕ್ಷಾವರಣ ಇದನ್ನು ಸಂಸ್ಕೃತದಲ್ಲಿ ದುರ್ಗ ಎಂದು ಹೇಳುತ್ತಾರೆ. ಕೋಟೆಗೆ ಪುರ, ಕಿಲ್ಲೆ ಎಂಬ ಅರ್ಥಗಳು ಉಂಟು. ಸೈನಿಕರುಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ಮತ್ತು ರಕ್ಷಣೆಗೆ ಮುಡುಪಾಗಿರುವ ಗಟ್ಟಿಯಾದ ಸ್ಥಳವೇ ಕೋಟೆ ಎಂದೆನಿಸಿಕೊಳ್ಳುತ್ತದೆ. ಋಗ್ವೇದದಲ್ಲಿ ಪುರ ಉಲ್ಲೇಖವಿದೆ. ಪುರ ಎಂದರೆ ಭದ್ರವಾದ ಕೋಟೆಯನ್ನು ಹೊಂದಿದ ಪಟ್ಟಣ ಎಂದರ್ಥ.[೩೮] ದುರ್ಗಹೀನೋ ಪ್ರಜಾಪತಿಃ ವಾತಾಭ್ರಮಿವ... ದುರ್ಗಗಳಿಲ್ಲದ ರಾಜನು ಬಿರುಗಾಳಿಗೆ ಸಿಲುಕಿದ ಮೋಡವಾಗಿ ಚದುರಿಸಲ್ಪಡುತ್ತಾನೆ ಎಂದು ಅಭಿಲಕ್ಷಿತಾರ್ಥ ಚಿಂತಾಮಣಿ ಗ್ರಂಥ ರಾಜನ ವಾಸ್ತವ್ಯಕ್ಕೆ ದುರ್ಗದ ಮಾಹಿತಿಯನ್ನು ಹೇಳಿದರೆ[೩೮]

ಮಾನವನು ತನ್ನ ನಾಗರಿಕತೆಯ ಪಥದಲ್ಲಿ ತನ್ನ ಸಮುದಾಯದ ಒಂದೆಡೆ ನೆಲೆಗೊಂಡಾಗ ಸಣ್ಣ ಸಣ್ಣ ಗುಂಪಾಗಿ ನೆಲೆನಿಂತು ಜನಸಂಖ್ಯೆ ಹೆಚ್ಚಾಗಿ ಬೇರೆ ಗುಂಪಾಗಿ, ಊರುಗಳಾಗಿ ಬದಲಾದಾಗ ಸಮಾಜ ಜೀವಂತ ಪ್ರಜ್ಞೆ ಹಾಗೂ ಅಭದ್ರತೆ ಮೂಡಿದಾಗ ತಾನು ನೆಲೆನಿಂತ ಊರಿಗಾಗಿ, ರಕ್ಷಣೆಗಾಗಿ ಕೋಟೆ ಕಟ್ಟಿಕೊಳ್ಳುವ ಅವಶ್ಯಕತೆ ಕಂಡುಬಂದಿತು. ಊರು ಬೆಳೆದು ರಾಜ್ಯಗಳಾದವು, ರಾಜ್ಯಗಳನ್ನು ರಕ್ಷಿಸಲು ರಾಜ ಕೋಟೆ ಕಟ್ಟಿಸಿದ. ಹೀಗಾಗಿ ಕೋಟೆ ಮಹತ್ತರ ಪಾತ್ರವಹಿಸಿದೆ. ಒಬ್ಬ ಬಿಲ್ಲುಗಾರನು ಕೋಟೆಗೋಡೆಯ ಹಿಂದೆ ರಕ್ಷಣೆ ಪಡೆದು ವೈರಿ ಪಡೆಯ ನೂರಾರು ಜನರೊಂದಿಗೆ ಹೋರಾಡಬಹುದು. ಹಾಗೆ ನೂರಾರು ಬಿಲ್ಲುಗಾರರು, ಸಾವಿರಾರು ವೈರಿಗಳೊಂದಿಗೆ ಹೋರಾಡಬಹುದು. ನಾಡ ನೆಲದ ರಕ್ಷಣೆಗಾಗಿ ಹಾಗೂ ಅಲ್ಲಿನ ಜನರ ಹಿತರಕ್ಷಣೆಯ ಪರಿಕಲ್ಪನೆ ಕೋಟೆ ರಚನೆ.[೮]

ಕೋಟೆ ಇತಿಹಾಸ– ಕ್ರಿ.ಪೂ. ೨೦೦೦ಕ್ಕೆ ಹಿಂದೆ 'ನಿನವ' ಮತ್ತು ಬ್ಯಾಬಿಲೋನಿಯ(ಗ್ರೀಸ್) ರಕ್ಷಣಾ ಗೋಡೆಗಳು ಇದ್ದ ವಿಚಾರ ತಿಳಿಯುತ್ತದೆ.[೯] ಕ್ರಿ.ಪೂ. ೨೦೦೦ರಲ್ಲೇ ಇಟ್ಟಿಗೆ, ಮಣ್ಣು ಬೆರೆಸಿ ಕೋಟೆ ಕಟ್ಟುವ ವಿಧಾನ ತಿಳಿದಿದ್ದರಂತೆ. ಕ್ರಿ.ಪೂ. ೨೨೧ಕ್ಕೆ ಸೇರಿದ ಚೀನಾ ಮಹಾಗೋಡೆ ಮಂಗೋಲಿಯನ್ನರ ಆಕ್ರಮಣ ತಡೆದು ಜಗತ್ತಿನ ಅತಿ ಉದ್ದದ ರಕ್ಷಣೆಗೋಡೆ ಎನಿಸಿದರೆ ಇನ್ನೊಂದು ಕುತೂಹಲದ ವಿಷಯ ಜಗತ್ತಿನ ೨ನೇ ಅತಿದೊಡ್ಡ ಕೋಟೆ ಇರುವುದು ಭಾರತದ ರಾಜಸ್ಥಾನ ರಾಜ್ಯದಲ್ಲಿ ಎಂಬುದು ಬಹುಜನರಿಗೆ ತಿಳಿದಿಲ್ಲ. ಭಾರತದ ಇತಿಹಾಸದಲ್ಲಿ ಕೋಟೆಯ ಪ್ರಾಚೀನತೆ ಪುರಾಣಕಾಲದ ಇಂದ್ರಪ್ರಸ್ಥ(ದೆಹಲಿ) ನಗರದ ಪಾಂಡವರ ಕೋಟೆಯ ಒಂದು ಭಾಗ ದೆಹಲಿ ಹುಮಾಯೂನ ಸರಿಪಡಿಸಿದ. ರಾಮಾಯಣ ಮತ್ತು ಹರಪ್ಪ, ಮೆಹೆಂಜೋದಾರೋಗಳಲ್ಲಿ ಕೋಟೆಗಳಿದ್ದವು ಎಂಬುದು ಉತ್ಖನನಗಳಿಂದ ತಿಳಿಯುತ್ತದೆ. ಕರ್ನಾಟಕದಲ್ಲಿ ಶಾತವಾಹನ(ಕ್ರಿ.ಶ. ೨೦೦) ಅವಧಿಯ ಸನ್ನತಿ ಕೋಟೆ ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನವಾದದ್ದು. ಶಾಸನದಲ್ಲಿ ಉಲ್ಲೇಖವಾದ ಕೋಟೆ– ಬಾದಾಮಿ ಚಾಲುಕ್ಯರ ೧ನೇ ಪುಲಿಕೇಶಿ ಕಾಲದ ಕೋಟೆ ಕ್ರಿ.ಶ. ೫೪೩ರಲ್ಲಿ ನಿರ್ಮಿಸಿದ ದಾಖಲೆಗಳಿವೆ.[೧೦]

**ಕೋಟೆ ಪ್ರಕಾರಗಳು**

ಕೋಟೆಗಳ ರಚನೆಯ ವಿನ್ಯಾಸವೇನೆಂಬುದನ್ನು ತಿಳಿಯಲು ನಾವು ಸಾಹಿತ್ಯ ಹಾಗೂ ಶಾಸನಗಳನ್ನು ಅವಲಂಬಿಸಬೇಕಾಗುತ್ತದೆ. ಪ್ರಾಚೀನ ವಾಸ್ತು ಗ್ರಂಥಗಳಾದ ಮಾನಸಾರ, ಮಯಾಮತ, ವಿಶ್ವಕರ್ಮ, ವಾಸ್ತು ಹಾಗೂ ಶಿಲ್ಪರತ್ನ ಪುರಾಣಗಳಾದ ಮತ್ಸ್ಯಪುರಾಣ, ಮನುಸ್ಮೃತಿ, ಶುಕ್ರನೀತಿಸಾರ, ಬೃಹತ್–ಸಂಹಿತಾ ಇತ್ಯಾದಿಗಳು ಕೋಟೆಗಳ ವರ್ಗೀಕರಣವನ್ನು ತಿಳಿಸುತ್ತವೆ. ಈ ವರ್ಗೀಕರಣದಲ್ಲಿ ಕೋಟೆಯ ಸ್ಥಳ, ಆಕಾರ ಮತ್ತು ರಚನೆಗೆ ಉಪಯೋಗಿಸುವ ವಸ್ತುಗಳನ್ನು ಆಧಾರವಾಗಿಸಿಕೊಂಡಿದೆ. ಕೋಟೆಯಲ್ಲಿ ಎರಡು ವಿಧಗಳಿವೆ. ಒಂದು ಶಾಶ್ವತವಾದ ಕೋಟೆಗಳು; ಇಲ್ಲಿ ಜನರ ರಕ್ಷಣೆ ಮುಖ್ಯ ಆದ್ಯತೆ. ಎರಡನೆಯದು ರಣರಂಗದ ಕೋಟೆ ಇದು ಸೈನ್ಯವನ್ನು ವಶಪಡಿಸಿಕೊಳ್ಳುವುದು ಮತ್ತು ಯುದ್ಧ ಸ್ಥಳ ರಕ್ಷಿಸುವುದು.

ಕ್ರಿ.ಪೂ. ೩ನೇ ಶತಮಾನದ ಮೌರ್ಯ ಚಕ್ರವರ್ತಿ ಚಂದ್ರಗುಪ್ತನ ಮಂತ್ರಿಯಾಗಿದ್ದ ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ಒಂದು ರಾಜ್ಯಕ್ಕೆ ಪ್ರಮುಖವಾದ ಸಪ್ತಾಂಗಗಳಿವೆ. ಅವುಗಳೆಂದರೆ: ರಾಜ, ಅಮಾತ್ಯ, ರಾಜಧಾನಿ, ಕೋಶ, ದುರ್ಗ, ಮಿತ್ರ ಮತ್ತು ಸೈನ್ಯ, ರಾಜ್ಯದಲ್ಲಿ ಸೈನ್ಯ ಮತ್ತು ಕೋಶ ಭದ್ರತೆಯಿಂದ ಇರಬೇಕಾದರೆ ಕೋಟೆ ಮುಖ್ಯವಾದುದು.[೧೨]

ಕನ್ನಡ ಪಂಚತಂತ್ರ ರಚಿಸಿದ ದುರ್ಗಸಿಂಹ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲನ ಸಂದಿವಿಗ್ರಹಿಯಾಗಿದ್ದು, ಈತನು ಕೋಟೆಯನ್ನು ೮ ಪ್ರಕಾರದಲ್ಲಿ ವಿಂಗಡಿಸಿದ್ದಾನೆ.

### ಜಲದುರ್ಗ

೧. ಅಂತರ್ದ್ವೀಪ: ಎರಡು ನದಿಗಳ ಸಂಗಮದ ಮಧ್ಯದ ಕೋಟೆ ೨. ಮಹಾಸ್ಥಳ: ದೊಡ್ಡಕೆರೆ, ಮುಳ್ಳುಗಳಿಂದ ತುಂಬಿದ ಸರೋವರಗಳಿಂದ ಸುತ್ತುವರಿದ ಕೋಟೆ. ಈ ತರಹದ ಕೋಟೆ ಹೋಬಳಿಯಲ್ಲಿ ಕಂಡುಬರುವುದಿಲ್ಲ.

### ಗಿರಿದುರ್ಗ

೧. ಗುಹ್ಯ: ಬಹಳ ಎತ್ತರವಾದ ಬೆಟ್ಟದ ತುದಿಗಳು, ನಾಲ್ಕು ಕಡೆಯಿದ್ದು ಒಂದೇ ಬಾಗಿಲುಳ್ಳ ಕೋಟೆ. ೨. ಪ್ರಸ್ತರ: ಎಲ್ಲಿಯೂ ಒಳ್ಳೆಯ ದಾರಿಯಿಲ್ಲದೆ, ಬೆಟ್ಟಗಳ ನಡುವೆ ನೀರು ಬೀಳುವ ಸ್ಥಳದಲ್ಲಿ ಮಾತ್ರ ಕಿರಿದಾದ ದಾರಿ ಇರುವುದು. ಕೂಡ್ಲಿಗಿ ಹೋಬಳಿಯಲ್ಲಿ ಕಂಡುಬರುವ ಗಿರಿದುರ್ಗ, ವೀರದುರ್ಗ ಮತ್ತು ಅಮರದೇವರ ಕೂಡದಲ್ಲಿ ನೋಡಬಹುದು. ಅವು ಎತ್ತರದ ಗುಡ್ಡಗಳಲ್ಲಿ ಕಡಿದಾದ ಬಂಡೆಗಳ ನಡುವೆ ನಿರ್ಮಾಣವಾಗಿದೆ. ವಿಶೇಷವಾಗಿ ವೀರನದುರ್ಗ.



### ಸ್ಥಲದುರ್ಗ

೧. ಉದಕಸ್ತಂಭ: ಕೋಟೆಯ ಹೊರವಲಯದಲ್ಲಿ ನೀರು, ಗಿಡ, ಮರ ಬಳ್ಳಿಗಳಿಲ್ಲದೆ, ಒಳಗೆ ಮಾತ್ರ ಹುಲ್ಲುಕಡ್ಡಿ ನೀರಿನಿಂದ ಸಮೃದ್ಧವಾಗಿರುವುದು. ೨. ವೈರಣಿ: ದುರ್ಗದ ಹೊರಗೆ ಉಪ್ಪುನೀರು, ಕುಡಿಯಲುಬಾರದ ನೀರು.

### ವನದುರ್ಗ

೧. ಕರ್ದಮೋದಕ: ಸುತ್ತ ನೀರು ತುಂಬಿದ ಜಲಾಶಯವಿದ್ದು ಹೆದರಿಸುವಷ್ಟು ಅತಿಶೀತವಾದ ಕೆಸರುಳ್ಳದ್ದು. ೨. ಸ್ತಂಭಗಹನ: ಅನೇಕ ಮರಗಳಿಂದ ಪರಿವೃತವಾಗಿ ಸುತ್ತಮುತ್ತ ಹುಲ್ಲು ಯಥೇಚ್ಚವಾಗಿ ಬೆಳೆದಿರುವುದು. ಈ ತರಹದ ದುರ್ಗ ಕೂಡ್ಲಿಗಿ ಹೋಬಳಿಯಲ್ಲಿ ಅಲ್ಲಲ್ಲಿ ನೋಡಬಹುದು.[೪೩]

ಒಟ್ಟಾರೆಯಾಗಿ ಕರ್ನಾಟಕದ ಬಹುಭಾಗ ಗಿರಿದುರ್ಗಗಳೇ ಪ್ರಮುಖವಾಗಿ ಕಾಣುತ್ತವೆ. ಕೂಡ್ಲಿಗಿ ತಾಲ್ಲೂಕಿಗೆ ಸಂಬಂಧಿಸಿದಂತೆ ಅನೇಕ ಗ್ರಾಮಗಳಲ್ಲಿ ಕೋಟೆಗಳಿದ್ದ ಮಾಹಿತಿ ದೊರೆಯುತ್ತದೆ. ಅದರಲ್ಲಿ ವೀರನದುರ್ಗ, ಗುಡೇಕೋಟೆ, ಜರಿಮಲೆ ಕೋಟೆಗಳು ಈಗಾಗಲೇ ಹಲವಾರು ಬಾರಿ ಉಲ್ಲೇಖಗೊಂಡಿವೆ. ಅದರ ಹೊರತಾಗಿ ಕೂಡ್ಲಿಗಿ ತಾಲ್ಲೂಕು, ಹೋಬಳಿ ವಿಷಯದಲ್ಲಿ ಕೋಟೆಗಳ ಮಾಹಿತಿ ತಿಳಿಯುವುದಾದರೆ ಕೊಟ್ಟೂರು, ಉಜ್ಜಿನಿ, ಕೂಡ್ಲಿಗಿ, ಅಮರದೇವರಗುಡ್ಡ, ಪಾಲಯ್ಯನಕೋಟೆ, ಶಿವಪುರ, ಮೊರಬ, ಅಮ್ಮನಕೆರೆ, ಕಕ್ಕುಪ್ಪಿ, ಹಿರೇಹೆಗ್ಡಾಳ್, ವಿರುಪಾಪುರ, ಹನಸಿ, ದೇವಲಾಪುರ, ಬೊಪ್ಪಲಾಪುರ ಮುಂತಾದ ಗ್ರಾಮಗಳಲ್ಲಿ ಕೋಟೆಗಳಿದ್ದ ಅಂಶ ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿದ್ದು, ಅವುಗಳಲ್ಲಿ ಕೊಟ್ಟೂರು, ಕೂಡ್ಲಿಗಿ, ಉಜ್ಜನಿ, ಮೊರಬ, ಶಿವಪುರ, ವಿರುಪಾಪುರದಲ್ಲಿ ಯಾವುದೇ ಕೋಟೆ ಅವಶೇಷಗಳು ಸಿಗುವುದಿಲ್ಲ. ಆದರೆ ಭೀಮನಕೋಟೆ, ಕೊತ್ತಲ ಆಂಜನೇಯ(ಕೂಡ್ಲಿಗಿ), ಕ್ವಾಟೆಬಾಗಿಲು(ಮೊರಬ), ಕೋಟೆಬಯಲು(ಶಿವಪುರ), ಹುಡೇವು(ಹನಸಿ) ಕೋಟೆಗಳಿದ್ದ ನಾಮವಶೇಷದ ಕೋಟೆಭಾಗಗಳು ಈ ಪ್ರಾಂತ್ಯಗಳಲ್ಲಿ ಇಂದಿಗೂ ರೂಢಿಯಲ್ಲಿ ಕರೆಯಲ್ಪಡುತ್ತಿವೆ.

ಇನ್ನು ಕೋಟೆಗಳಿದ್ದು ಇಂದಿಗೂ ಕೋಟೆ ಅವಶೇಷಗಳಿರುವ ಗ್ರಾಮಗಳೆಂದರೆ: ಅಮ್ಮನಕೆರೆ, ಕಕ್ಕುಪ್ಪಿ, ಬೊಪ್ಪಲಾಪುರ, ಅಮರದೇವರಗುಡ್ಡ, ಹನಸಿಯಲ್ಲಿ ಕೋಟೆ ಕುರುಹುಗಳನ್ನು ಕಾಣಬಹುದು. ಅವುಗಳ ಉಲ್ಲೇಖ ಕೆಳಗೆ ಸಂಕ್ಷಿಪ್ತವಾಗಿ ನೀಡಲಾಗಿದೆ.

**ಅಮ್ಮನಕೆರೆ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ೮ ಕಿ.ಮೀ. ಅಂತರದಲ್ಲಿದೆ. ಹಿಂದೆ ಜರಿಮಲೆ, ಗುಡೇಕೋಟೆ, ಚಿತ್ರದುರ್ಗದ ಪಾಳೇಗಾರರು ತಮ್ಮ ಆಳ್ವಿಕೆಯಲ್ಲಿ ಈ ಗ್ರಾಮವನ್ನು ಮುತ್ತಿದ ಆಳ್ವಿಕೆಗೆ ಒಳಪಡಿಸಿಕೊಂಡ ಮಾಹಿತಿ ಸ್ಥಳೀಯರಿಂದ ತಿಳಿಯುತ್ತದೆ. ಗ್ರಾನೈಟ್‌ಶಿಲೆಯಲ್ಲಿ ನಿರ್ಮಿಸಿದ್ದು ಪ್ರವೇಶ ದ್ವಾರ ಚೌಕಾಕಾರದ ಕೊತ್ತಲಗಳನ್ನು ನಿರ್ಮಿಸಲಾಗಿದೆ. ೪೦ರಿಂದ ೫೦ ಅಡಿ ಉದ್ದದ ಕೋಟೆ ಅವಶೇಷ ಇಂದಿಗೂ ನೋಡಬಹುದು. ಜರಿಮಲೆ ಪಾಳೇಗಾರರು, ಹಲವಾರು ಸಾರಿ ದಾಳಿ ಮಾಡಿದ್ದು, ಚಿತ್ರದುರ್ಗದ ಪಾಳೇಗಾರರು ಇಲ್ಲಿಂದಲೇ ಕಕ್ಕುಪ್ಪಿ ಜರಿಮಲೆಗೆ ಹೋಗುತ್ತಿದ್ದರು ಎನ್ನಲಾಗುತ್ತದೆ.

**ಕಕ್ಕುಪ್ಪಿ**

ಕೂಡ್ಲಿಗಿಯಿಂದ ಗುಡೇಕೋಟೆಗೆ ಹೋಗುವ ದಾರಿಯಲ್ಲಿ ೫ ಕಿ.ಮೀ. ದೂರದಲ್ಲಿ ಈ ಗ್ರಾಮವಿದ್ದು ಆಳರಸರ ಆಡಳಿತಕ್ಕೆ ಒಳಪಟ್ಟಿದ್ದು, ಜರಿಮಲೆ, ಗುಡೇಕೋಟೆ ನಾಯಕರು ಇಲ್ಲಿ ತಮ್ಮ ಆಡಳಿತ ಸ್ಥಾಪಿಸಿದರು ಎಂಬುದು ತಿಳಿಯುತ್ತದೆ. ಕಕ್ಕುಪ್ಪಿ ಅಡವಿಯ ಮಧ್ಯದಲ್ಲಿ ಬಸವನಾಳು ಎಂಬ ಗ್ರಾಮವಿದ್ದು ಅಲ್ಲಿನ ಜನ ಪ್ಲೇಗ್, ಕಾಲರದಿಂದ ಸ್ಥಳಾಂತರಿಸಿ ಕಕ್ಕಿಮರ, ಕಾರೆಮರದ ಅಡಿಯಲ್ಲಿ ಬಂದು ನೆಲೆಸಿ ಕಾರೆಮರದ ಕುಪ್ಪಿ ಕುಪ್ಪಿ ಜಾಗವು ಜನವಸತಿ ಮಾಡಿ ಮುಂದೆ ರಕ್ಷಣೆಗೆ ಕೋಟೆ ನಿರ್ಮಿಸಲಾಯಿತಂತೆ. ಅದರ ಕುರುವಾಗಿ ಹುಡೇವು ಇಂದಿಗೂ ಇಲ್ಲಿದೆ. ಊರಿನ ಬೆಟ್ಟ ತಪ್ಪಲಿನಲ್ಲಿ ಪುರಾತನ ಶಿಶ್ನಾಕಾರದ ಶಿವಲಿಂಗವಿದೆ. ಬೂದುಬಣ್ಣದ ಕಲ್ಲಿನಲ್ಲಿ ಕೆತ್ತಲಾಗಿದ್ದು, ಕಾಡುಗಲ್ಲಿನ ಚೌಕಾಕಾರದ ಚಿಕ್ಕಗುಡಿಯಲ್ಲಿದೆ. ಕೂಡ್ಲಿಗಿ ಹೋಬಳಿ ಅಲ್ಲದೆ ತಾಲ್ಲೂಕಿನಲ್ಲೇ ಹೆಚ್ಚು ಬಲವುಳ್ಳ ಮರಗಳ ತಪ್ಪಲಿನ ಪ್ರದೇಶವಾಗಿದ್ದು ಮಧ್ಯದಲ್ಲಿ ಹಳ್ಳಗಳು ಬೃಹದ್ ಬಂಡೆಗಳಿವೆ. ಇದು ಆದಿಮಾನವನ ನೆಲೆಯಾಗಿತ್ತು ಎಂಬುದು ಕೆಲವು ಕುರುವುಗಳು ಸಂಶೋಧಕರಿಂದ ತಿಳಿದುಬಂದಿದೆ.

**ವಿರುಪಾಪುರ**

ಕೂಡ್ಲಿಗಿ ಕೇಂದ್ರದಿಂದ ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ೮ ಕಿ.ಮೀ. ದೂರದಲ್ಲಿ ಇದ್ದು ಈ ಗ್ರಾಮ ಹಿಂದೆ ವಿಜಯನಗರ ಕಾಲದಲ್ಲೇ ಹೆಚ್ಚು ಪ್ರಚಲಿತದಲ್ಲಿತ್ತು. ಶ್ರೀಕೃಷ್ಣದೇವರಾಯ ಈ ಊರಿನೊಂದಿಗೆ ಒಡನಾಟವಿತ್ತು ಎಂಬ ಮಾಹಿತಿ ಬಲ್ಲ ಮೂಲ ಸ್ಥಳೀಯವಾಗಿ ಕೇಳಿಬರುತ್ತವೆ. ಅಮ್ಮನಕೇರಿ ನಿವೃತ್ತ ಶಿಕ್ಷಕರಾದ ಎಂ. ನಾಗಭೂಷಣ ಅವರು ನೀಡುವ ಮಾಹಿತಿ ಪ್ರಕಾರ ವಿರುಪಾಪುರದಲ್ಲಿ ಈ ಹಿಂದೆ ಕೋಟೆ ಇದ್ದು(ಇಂದು ಅದು ಕಂಡುಬರುವುದಿಲ್ಲ), ಈ ಗ್ರಾಮ ಹಣದ ಭಂಡಾರ ಗ್ರಾಮವಾಗಿತ್ತು. ಆದ್ದರಿಂದ ಚಿತ್ರದುರ್ಗದ ಪಾಳೇಗಾರರು ಈ ಗ್ರಾಮದ ಮೇಲೆ ಪದೇ ಪದೇ ದಾಳಿ ಮಾಡುತ್ತಿದ್ದರು ಎಂಬ ಮಾಹಿತಿ ನೀಡುತ್ತಾರೆ. ಚಿತ್ರದುರ್ಗದ ಮದಕರಿ ನಾಯಕ ಈ ವಿರುಪಾಪುರದ ಮೂಲಕ ಕೂಡ್ಲಿಗಿಗೆ ಬಂದು ಮುಂದೆ ಹೊಸಪೇಟೆ ಮಾರ್ಗವಾಗಿ ಹಂಪೆಯ ವಿರುಪಾಕ್ಷನ ದರ್ಶನಕ್ಕೆ ಹೋಗುತ್ತಿದ್ದ ಎಂಬುದು ಗೊತ್ತಾಗುತ್ತದೆ.

**ಹನಸಿ**

ಈ ಗ್ರಾಮ ಕೂಡ್ಲಿಗಿಯಿಂದ ೯ ಕಿ.ಮೀ. ವಾಯುವ್ಯ ಭಾಗದಲ್ಲಿ ಇದ್ದು, ಕೋಗಳಿ ೫೦೦ರ ಹನಸಿ–೧೨ ಎಂಬುದಾಗಿ ಶಾಸನೋಕ್ತವಾಗಿದ್ದು ಇಲ್ಲಿ ಕೋಟೆ ಇದ್ದ ಉಲಬ್ಲೇಖವಿದೆ. ಅದರ ಕುರುಹು 'ಕೊತ್ತಳ' ಈ ಊರಿನಲ್ಲಿ ಕಂಡುಬರುತ್ತದೆ, ಅದನ್ನು ಸ್ಥಳೀಯರು ಹುಡೇವು ಎನ್ನುವರು.

ಕೋಟೆ ವಿವರದ ಬಗ್ಗೆ ಕ್ರಿ.ಶ. ೧೫೭೦ರಿಂದ ೧೬೦೮ ರವರೆಗೆ ಹರಪನಹಳ್ಳಿಯನ್ನು ಆಳಿದ ಭರಮಣ್ಣ ನಾಯಕನೆಂಬ ಪಾಳೇಗಾರರು ಒಮ್ಮೆ ಹನಸಿ ಕೋಟೆಗೆ ಮುತ್ತಿಗೆ ಹಾಕಿ ವಶಪಡಿಸಿಕೊಂಡ ವಿಚಾರವು ತಿಳಿಯುತ್ತದೆ.

**ಶಿವಪುರ**

ಈ ಹಿಂದೆ ಶಿವಪುರ ಬೆಳ್ನಾಡು ಪ್ರದೇಶವಾಗಿತ್ತು.[೪೪] ಈ ಗ್ರಾಮದಲ್ಲಿ ಕೋಟೆ ಇದ್ದ ಬಗ್ಗೆ ಗ್ರಾಮದ ಹಿರಿಯರಾದ ಆದಿಮನಿ ಷಣ್ಮುಖಪ್ಪ ತಿಳಿಸುತ್ತಾರೆ. ಕೋಟೆ ಪ್ರದೇಶ ಎನ್ನಲಾಗುವ ಬೆಳ್ನಾಡಿನ ಬಯಲಿನಲ್ಲಿ ಅಲ್ಲಲ್ಲಿ ಚದುರಿದ ಕೋಟೆಕಲ್ಲುಗಳು, ಬುರುಜಿನ ದಿನ್ನೆಗಳು, ಕೋಟೆ ರಕ್ಷಣೆಗೆ ಹೋರಾಡಿ ವೀರಮರಣ ಹೊಂದಿದ ವೀರರ ವೀರಗಲ್ಲುಗಳು ಕಾಣಸಿಗುತ್ತವೆ. ರಕ್ತದಗುಂಡಿ(ಮಡುವು) ಆಂಜನೇಯನ ದೇವಸ್ಥಾನವಿದೆ. ಎಂ. ಕೊಟ್ರೇಶ್ ಅವರು ಬೆಳ್ನಾಡು ಕೋಟೆಯ ಮಾಹಿತಿ ನೀಡುತ್ತಾರೆ.

ಕ್ರಿ.ಶ. ೧೬೫೫ರಿಂದ ೧೬೬೭ರ ಅವಧಿಯಲ್ಲಿ ಒಮ್ಮೆ ಬೆಳ್ನಾಡು ಕೋಟೆಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡ ಹರಪನಹಳ್ಳಿ ನಾಯಕ ಎಂಬುದಾಗಿ ತಿಳಿಯುತ್ತವೆ. ಆಗ ಕೋಟೆ ನಾಶವಾಗಿ ಶಿವಪುರಕ್ಕೆ ಬಂದು ಜನವಾಸ್ತವ್ಯ ಮಾಡಿದರು ಎನ್ನಲಾಗುವುದು. ಇತ್ತೀಚೆಗೆ ದನಗಾಯಿಗಳು ಕೋಟೆ ಕೆಡವಿದ ವಿಚಾರ ತಿಳಿಯುತ್ತದೆ.

**ಕೆರೆಕಟ್ಟೆ**

Water is the most important substance for the life existance on earth. ಅಂದರೆ ಭೂಮಿಯ ಮೇಲೆ ಬದುಕುವ, ಬದುಕಿ ತಮ್ಮ ಜೀವ ಉಳಿಸಿಕೊಂಡು ಜೀವನ ಸಾಗಿಸುವ ಪ್ರತಿಯೊಂದು ಜೀವಿಗೂ ನೀರು ಬಹಳ ಮಹತ್ವದ ವಸ್ತುವಾಗಿದೆ.[೪೫] ಜೀವ ಮೂಲವೇ ಜಲ ಎಂಬ ತಿರುಳು ಸತ್ಯವಾಗಿದೆ. ಒಳ್ಳೆ ನೀರಿನ ಸೌಲಭ್ಯಗಳು ಒಳ್ಳೆಯ ಸಮಾಜವನ್ನು ನಿರ್ಮಿಸಬಲ್ಲವು. ಭಾರತ ಕೃಷಿ ಪ್ರಧಾನದೇಶ. ಇಲ್ಲಿ ಶೇಕಡ ೭೦ರಷ್ಟು ಜನರು ಕೃಷಿ ಅವಲಂಬಿಸಿದ್ದಾರೆ. ಬೇಸಾಯ ಕಂಡುಕೊಳ್ಳುವ ಪೂರ್ವದಲ್ಲಿ ಸಂಚಾರಿಯಾಗಿದ್ದ ಆದಿಮಾನವ ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುವುದರ ಜೊತೆಗೆ ಸಾಗರ, ಹೊಳೆ, ಹಳ್ಳ, ಹೊಂಡ, ಕೆರೆ ಮುಂತಾದ ಜಲಾಶಯನಗಳ ಹತ್ತಿರ ನೆಲೆನಿಂತು ಬಂಡೆಗಲ್ಲಿನ ಆಶ್ರಯಿಸಿ ಜೀವನ ಜಲಾಶ್ರಯ ಸುತ್ತಮುತ್ತ ಕಂಡುಕೊಂಡ ನಂತರ ಬದುಕಿಗೆ ಒಂದು ಕ್ರಮಬದ್ಧತೆ ಬೆಳೆದುಬಂತು.

ಪ್ರಕೃತಿಯಲ್ಲಿ ಮಡುಗಟ್ಟಿದ ನೀರನ್ನು ಕಂಡು ಹರಿಯುವ ನೀರಿಗೆ ಒಡ್ಡುಕಟ್ಟಿ ನೀರನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸತೊಡಗಿದ. ಇತಿಹಾಸ ಪೂರ್ವದಲ್ಲಿ ಕೆರೆಗಳನ್ನು ಮೊದಲಿಗೆ ನಿರ್ಮಾಣ ಮಾಡಿದವರು ತಾಮ್ರ ಮತ್ತು ಬೃಹತ್ ಶಿಲಾಯುಗದ ಜನರು ಇದಕ್ಕೆ ಉದಾಹರಣೆಗೆ ಪೂನಾದ ಹತ್ತಿರದ ಇನಾಂಗಾವ್‌ನಲ್ಲಿ ತಾಮ್ರಯುಗದ ಜನ ನಿರ್ಮಿಸಿದ ಕೆರೆ ಪತ್ತೆಯಾಗಿದೆ. ಪುರಾತನ ಕಾಲದಿಂದಲೂ ಈ ದೇಶದಲ್ಲಿ ವಿವಿಧ ಗಾತ್ರದ ಕೆರೆಗಳನ್ನು ನಿರ್ಮಿಸಿ ಅವುಗಳಿಂದ ಭೂ ಸಾಗುವಳಿ ಮಾಡುತ್ತಲೇ ಬಂದಿದ್ದಾರೆ. ಬೇಸಾಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕೆರೆ, ನೀರಾವರಿ ವ್ಯವಸ್ಥೆಯನ್ನೇ ಅವಲಂಬಿಸಬೇಕಾಯಿತು.

ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಮಂ ಮಾಡಿಸ ।
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ ।
ರ್ಗ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯನುತ್ತಿಯೆಂತೆಲ್ಲವಂ ಪಿಂದೆ ತಾ ।
ಯೆಱೆದಳ್ವಾಲೆಱೆವಂದು ತೊಟ್ಟು ಕಿವಿಯೊಳಂ ಲಕ್ಷ್ಮೀಧರಾಮಾತ್ಯನಾ ॥

ಈ ತರಹದ ಉಲ್ಲೇಖಿಸಿದ ಪದ್ಯವನ್ನು ವಿಜಯನಗರದ ಅರಸ ಪ್ರೌಢ ಪ್ರತಾಪ ದೇವರಾಯನ(ಕ್ರಿ.ಶ. ೧೪೦೬-೨೨) ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಲೆಕಾಳು ಗಣೇಶನ ಗುಡಿಯ ಮುಂದಿನ ಅಗಸೆಯಲ್ಲಿರುವ ಕ್ರಿ.ಶ. ೧೪೧೧ ಶಾಸನವು ತಿಳಿಸುತ್ತದೆ(ಎಸ್.ಪಿ.ಪಿ., IV, ನಂ. ೨೬೭).[೪೬]

'ಕೆರೆ' ಎಂಬ ಎರಡಕ್ಷರದ ಪದವು ಸಣ್ಣ ಪ್ರಮಾಣದ ಮಣ್ಣಿನ ಏರಿಯಿಂದ ಕೂಡಿದ ನೀರಿನ ಸಂಗ್ರಹಗಾರವೇ 'ಕೆರೆ' ಎಂದೆನಿಸಿಕೊಳ್ಳುತ್ತದೆ.[೪೭] ಈ ಕೆರೆ ನಿರ್ಮಾಣದಲ್ಲಿ ಶಾಸನಗಳು ಇತಿಹಾಸ ಬಿಚ್ಚಿಡುವ ಅತ್ಯಂತ ಪ್ರಮುಖ ಪಾತ್ರ ವಹಿಸಿವೆ. ಕೆರೆಕಟ್ಟೆ, ಕೊಳ, ಕಲ್ಯಾಣಿ, ಸರೋವರ, ಬಾವಿ ಮುಂತಾದ ಜಲಾಶಯಗಳನ್ನು ನಿರ್ಮಿಸುವುದು ಸತ್ಕಾರ್ಯವೆಂದು ನಮ್ಮ ಪೂರ್ವಜರು ನಂಬಿದ್ದರು. ಇದರ ಅನ್ವಯದಂತೆ ಕೂಡ್ಲಿಗಿ ಹೋಬಳಿಯು ಕೆರೆಕಟ್ಟೆಗಳ ನಿರಾಶ್ರಿತ ಪ್ರದೇಶವಾಗಿದ್ದು ಹೋಬಳಿಯ ಪ್ರಮುಖ ಗ್ರಾಮದ ಹೊರಹೊಲಯದಲ್ಲಿ ಕೆರೆ ಕಟ್ಟೆಗಳ ನಿರ್ಮಾಣ ನೋಡಬಹುದು. ಅದರಲ್ಲಿ ಕೂಡ್ಲಿಗಿ ಪಟ್ಟಣ ಒಂದು ದೊಡ್ಡಕೆರೆ, ಎರಡು ಮಧ್ಯಮ ಗಾತ್ರದ ಕೆರೆ ಕಟ್ಟೆಗಳನ್ನು ಹೊಂದಿದೆ. ಆ ಮಧ್ಯಮ ಗಾತ್ರದ ಕೆರೆಗಳನ್ನು ಉಡಸಲಮ್ಮನ ಕಟ್ಟೆ, ಮಲ್ಯಮ್ಮನ ಕೆರೆ ಎಂಬುದಾಗಿ ಕರೆಯುತ್ತಾರೆ. ಇನ್ನು ಅಮ್ಮನಕೆರಿ, ಮೊರಬ, ಕಕ್ಕುಪ್ಪಿ, ಕೈವಲ್ಯಪುರ, ಶಿವಪುರ, ಹಿರೆಗೆಡ್ಡಾಗ್ಳ್, ಸಾಸಲವಾಡ ಕುಪ್ಪಿನಕೆರೆ, ಈಚಲಬೊಮ್ಮನಹಳ್ಳಿ, ಅಮರದೇವರಗುಡ್ಡ ಬಡೇಲಡಕು, ಮೊರಬ ಮುಂತಾದ ಗ್ರಾಮಗಳು ಒಂದೊಂದು ಕೆರೆ ಹೊಂದಿವೆ. ಆದರೆ ಕೂಡ್ಲಿಗಿ ತಾಲ್ಲೂಕಿನಲ್ಲಿಯೇ ಅತಿ ದೊಡ್ಡ ಕೆರೆಗಳು ಕೊಟ್ಟೂರು ಮತ್ತು ಕೂಡ್ಲಿಗಿ, ಹನಸಿ ಕೆರೆಗಳು ಇವುಗಳಿಗೆ ಶತಮಾನಗಳಷ್ಟು ಹಿನ್ನೆಲೆ ಇದೆ.

ಒಂದು ಕೆರೆ ನಿರ್ಮಾಣಕ್ಕೆ ೧೨ ಸೂತ್ರಗಳನ್ನು ಹೇಳಿದೆ. ಅವು ಈ ಕೆಳಗಿನಂತೆ ಉಲ್ಲೇಖಿತವಾಗಿವೆ.

೧. ಅರಸ ಆಚಂದ್ರಾರ್ಕವಾಗಿ ಹೆಸರು ಗಳಿಸಿಕೊಳ್ಳವನಾಗಿ ಅಂತವನು ಕೆರೆ ನಿರ್ಮಿಸಬೇಕು.

೨. ಜಲಶಾಸ್ತ್ರದಲ್ಲಿ ನೈಪುಣ್ಯತೆ ಪಡೆದವನಾಗಿರಬೇಕು.

೩. ಉತ್ತಮ ಜೇಡಿಮಣ್ಣುಳ್ಳ ಕೆರೆ ಅಂಗಳ ಆಯ್ಕೆ ಮತ್ತು ಹೆಚ್ಚು ನೀರು ಹಿಂಗವ ಜಾಗವಾಗಬಾರದು.

೪. ನೀರಿನ ಬುಗ್ಗೆಯು ಕೆರೆಯಿಂದ ಸುಮಾರು ಮೂರು ಯೋಜನೆಯಷ್ಟು ದೂರವಿರಬೇಕು.

೫. ಬೆಟ್ಟಗುಡ್ಡಗಳ ಸಾಲನ್ನು ಕೆರೆ ನಿರ್ಮಿಸಲು ಉಪಯೋಗಿಸಿಕೊಳ್ಳಬೇಕು.

೬. ಗುಡ್ಡಗಳ ನಡುವಿನ ಕಣಿವೆ ಪ್ರದೇಶ ಕೆರೆ ಏರಿ ನಿರ್ಮಿಸಲು ಉಪಯೋಗಿಸಬೇಕು.

೭. ಕೆರೆ ಸಮೀಪದಲ್ಲಿ ಅನುಕೂಲವಾದ ಫಲನೀಡುವ ಜಮೀನು ಇರಬೇಕು.

೮. ಕೆರೆಯ ನೀರಿನ ಅಂಗಳ ವಿಸ್ತಾರವಾಗಿಯೂ ಆಳವಾಗಿಯೂ ಇರಬೇಕು.

೯. ಕೆರೆಯ ನಿರ್ಮಾಣದ ಸಮೀಪದಲ್ಲಿ ಕೆರೆಯ ಏರಿಯನ್ನು ನಿರ್ಮಿಸಲು ಕಲ್ಲುಗಳ ರಾಶಿ ಇರಬೇಕು.

೧೦. ಕೆರೆಯ ಸಮೀಪದ ಜಮೀನು ಫಲವತ್ತಾಗಿ ಸಮತಟ್ಟಾಗಿ ಇರಬೇಕು.

೧೧. ಕೆರೆಯ ತೂಬು, ನಿಯಂತ್ರಣ ಮತ್ತು ನೀರಿನ ಒತ್ತಡವನ್ನು ತಡೆಯುವ ಸಾಮರ್ಥ್ಯವಿರಬೇಕು.

೧೨. ಕೆರೆಯ ನಿರ್ಮಾಣದಲ್ಲಿ ತಂತ್ರಜ್ಞಾನ ತಿಳಿದ ೧೨ ಜನ ನುರಿತ ಅನುಭವಿಗಳಿಂದ ತಂಡ ಕೂಡಿರಬೇಕು.[೪೭]

ಈ ರೀತಿಯಾದ ಕೆರೆಯ ನಿರ್ಮಾಣದ ಪ್ರಮುಖ ಸೂತ್ರಗಳು ಗಮನ ಸೆಳೆಯುತ್ತವೆ. ಅವು ನಿರ್ಮಾಣದಲ್ಲಿ ವಾಸ್ತವ ಕೂಡ ಆಗಿವೆ. ಕೆರೆಯ ನಿರ್ಮಾಣದಲ್ಲಿ ನಿರ್ಮಾತೃ ಕೆಲವು ದೋಷಗಳನ್ನು ಗಮನಿಸುವುದು. ಅಂದರೆ ಕೆರೆಯ ರಚನೆಕಾರ್ಯದಲ್ಲಿ ಅನುಸರಿಸಬೇಕಾದ ಮುನ್ನೆಚ್ಚರಿಕೆಯ ಕ್ರಮಗಳು ತೆಗೆದುಕೊಳ್ಳಬೇಕಾದ ಅವಶ್ಯಕತೆ ಇರುತ್ತದೆ. ಅವುಗಳೆಂದರೆ:

೧. ಕೆರೆಯಿಂದ ನೀರು ಸ್ರವಿಸಬಾರದು ಅಥವಾ ಸೋರುವಿಕೆ ಆಗಬಾರದು.

೨. ಕೆರೆಯ ಪಾತ್ರದಲ್ಲಿನ ಮಣ್ಣು ಲವಣಾಂಶದಿಂದ ಕೂಡಿರಬಾರದು.

೩. ಎರಡು ರಾಜ್ಯಗಳ ನಡುವಿನ ಗಡಿಪ್ರದೇಶವನ್ನು ಆಯ್ಕೆ ಮಾಡಬಾರದು.

೪. ಕೆರೆಯ ಅಂಗಳದ ಮಧ್ಯಭಾಗ ಉಬ್ಬಾಗಿರಬಾರದು.

೫. ಅತ್ಯಲ್ಪ ನೀರು ಬರುವ ಪ್ರದೇಶವಾಗಲಿ, ಅತಿ ಹೆಚ್ಚು ಅಚ್ಚುಕಟ್ಟು ಇರುವ ಜಾಗವಾಗಲಿ ಯೋಗ್ಯವಲ್ಲ.

೬. ನೀರಾವರಿಯ ಜಮೀನು ಸ್ವಲ್ಪ ಇದ್ದು ಅಧಿಕ ನೀರು ಬರುವಂತಹ ಜಲಾನಯನ ಪ್ರದೇಶ ಕೂಡ ಯೋಗ್ಯವಲ್ಲ.

೭. ಅಲ್ಪ ಪ್ರದೇಶ ಅಧಿಕ ಭೂಮಿಯ ಕೂಡದು.[೪೮]

ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆರೆಗಳು ರಚನೆಯಾದಂತೆ ಕೂಡ್ಲಿಗಿ ಹೋಬಳಿಯ ಕೆರೆಗಳು, ಈ ಪ್ರಮುಖ ಅಂಶಗಳನ್ನು ಮೈಗೂಡಿಸಿಕೊಂಡು ನಿರ್ಮಾಣವಾಗಿರುವುದು ಕಂಡುಬರುತ್ತದೆ. ಅದರಲ್ಲಿ ಕೂಡ್ಲಿಗಿ ಹೋಬಳಿಯು ಪ್ರಾಚೀನ ಹಿನ್ನೆಲೆ ಹೊಂದಿದ್ದು ಅರಣ್ಯ, ಬೆಟ್ಟ-ಗುಡ್ಡಗಳ ಸಾಲು ಹಾಗೂ ಕೆರೆಗಳ ನಿರ್ಮಾಣಕ್ಕೆ ಯೋಗ್ಯವಾದ ಪ್ರದೇಶವಾಗಿರುವುದರಿಂದ ಹೆಚ್ಚಿನ ಮಳೆಯಾಶ್ರಿತ ಕೆರೆ ನಿರ್ಮಾಣವು ಹೆಚ್ಚಾಗಿ ನೋಡಬಹುದು. ಕೆರೆಗಳ ರಚನಾಕಾರ್ಯದಲ್ಲಿ ಕೆಲವು ಪ್ರಮುಖ ಅಂಶಗಳು, ಪ್ರಮುಖ ಪಾತ್ರ ವಹಿಸುತ್ತವೆ. ಅಂತವುಗಳಲ್ಲಿ ತೂಬು, ಕೋಡಿ, ಮದಗ, ಕಾಲುವೆ ಮುಂತಾದವು.

**ತೂಬು**

ತೂಬುಗಳಿಲ್ಲದ ಕೆರೆ ಕಾರ್ಯ ಅಸಾಧ್ಯ, ಕೆರೆಯ ಒಂದು ಅವಿಭಾಜ್ಯ ಅಂಗ ತೂಬುಗಳೇ. ಕೆರೆಯ ನೀರನ್ನು ಹೊರಗೆ ಹೋಗದಂತೆ ತಡೆಹಿಡಿದಿಡುವ ಸಾಧನಗಳು, ತೂಬುಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ರಚಿಸಿದ್ದು ಎರಡು ಅಥವಾ ನಾಲ್ಕು ಕಂಬಗಳಿಂದ ಕೂಡಿರುತ್ತವೆ. ಕೂಡ್ಲಿಗಿ ಹೋಬಳಿಯ ಎಲ್ಲಾ ಕೆರೆಗಳು ಎರಡು ಕಂಬಗಳಿಂದ ಕೂಡಿರುವುದೇ ಹೆಚ್ಚು. ಈ ತೂಬು ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡಗಲ್ಲನ್ನು ಹಾಸಲಾಗುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕ ವ್ಯಾಸವುಳ್ಳ ಮರದ ತುಂಡನ್ನು ಇಟ್ಟು ರಂಧ್ರವನ್ನು ಮುಚ್ಚಲಾಗುತ್ತದೆ. ಬೇಕಾದ ರೀತಿಯಲ್ಲಿ ನೀರನ್ನು ಬಳಕೆ ಮಾಡಿಕೊಳ್ಳಲಾಗುತ್ತದೆ.[೪೯] ಇದೇ ಮಾದರಿಯ ಆಧುನಿಕ ಲೋಹ ಬಳಸಿ ಕೆಲವು ನಿರ್ಮಾಣವಾಗಿರುವುದು ಇದೆ. ಕೆರೆ ಸಿದ್ಧಾಂತ ಕಾರ್ಯದಲ್ಲಿ ಕೂಡ್ಲಿಗಿ, ಕೊಟ್ಟೂರು, ಹನಸಿ, ಕೆರೆಗಳು ವಿಶೇಷತೆ ಹೊಂದಿವೆ. ಕೂಡ್ಲಿಗಿ ಕೆರೆ ಶತಮಾನಗಳಷ್ಟು ಅಳೆಯದಾದ ನಿರ್ಮಾಣವಾಗಿದ್ದು ತೂಬು, ಕಾಲುವೆ, ಮದಗ, ಕೋಡಿಗಳಿಂದ ಕೂಡಿದೆ. ಕೊಟ್ಟೂರು ಕೆರೆಯು ಪ್ರಾಚೀನ ಇತಿಹಾಸದೊಂದಿಗೆ ಹೆಚ್ಚು ನೀರಿನ ಸಂಗ್ರಹದ ಕೆರೆಯಾಗಿ ತೂಬು, ಕಾಲುವೆ, ಕೋಡಿಗಳನ್ನು ಒಳಗೊಂಡಿದೆ.

ಇನ್ನೂ ಹನಸಿ ಕೆರೆಯು ಬಳ್ಳಾರಿ ಜಿಲ್ಲೆಯಲ್ಲಿ ಎರಡನೇ ಅತಿದೊಡ್ಡ ಕೆರೆ(ಮೊದಲನೇಯದು ದರೋಜಿ ಕೆರೆ ಸಂಡೂರು ತಾಲ್ಲೂಕು) ಎಂದು ಕರೆಸಿಕೊಂಡಿದೆ. ಒಮ್ಮೆ ತುಂಬಿದರೆ ಮೂರು ವರ್ಷ ಕಾಲ ನೀರು ಸರಿಯುವುದಿಲ್ಲ ಎಂಬ ಮಾತಿದೆ. ಆದರೆ ಈ ಸ್ಥಿತಿ ಇಂದಿನ ದಿನಮಾನಗಳಲ್ಲಿ ಕಾಣಸಿಗುವುದಿಲ್ಲ. ಕಾರಣ ಮಳೆಯ ಕೊರತೆ ಇರುವುದು.

## ಕೋಡಿ

ಕೋಡಿಯು ಬಹಳ ಮುಖ್ಯವಾದ ಕೆರೆಯ ಭಾಗಗಳಲ್ಲೊಂದು. ಅತಿ ಹೆಚ್ಚು ನೀರು ಬಂದಾಗ ಕೆರೆ ಏರಿಗೆ ಒತ್ತಡ ಬೀಳುತ್ತದೆ. ಆ ಒತ್ತಡವನ್ನು ತಡೆಯಲು ಕೋಡಿಗಳನ್ನು ಅಳವಡಿಸಲಾಗುತ್ತದೆ. ಒಂದು ಕೆರೆಯ ಕೋಡಿ ಬಿತ್ತೆಂದರೆ ಆ ಕೆರೆಗೆ ಗರಿಷ್ಠ ಮಟ್ಟದ ನೀರು ಬಂದಿದೆ ಎಂದು ಅರ್ಥ.[೫೦] ಈ ತರಹದ ಕೋಡಿಗಳು ಕೂಡ್ಲಿಗಿ ಹೋಬಳಿಯ ಬಹುತೇಕ ಗ್ರಾಮಗಳ ಕೆರೆಗಳಲ್ಲಿವೆ. ಆದರೆ ಕೂಡ್ಲಿಗಿ ಕೆರೆಯಲ್ಲಿ ಕೋಡಿ ಅಲ್ಲದೆ ಮದಗವಿದೆ. 'ಮದಗ'ಗದ ಬಲಭಾಗದಲ್ಲಿ ಕನ್ನೀರಮ್ಮನ ಗುಡಿ ಇದ್ದು, ಇಲ್ಲಿ ಕೇಲು(ಕುಂಭ) ಮತ್ತು ಪಾದುಕೆಗಳಿವೆ. ಕೃಷಿ ಆರಂಭದ ಮುಂಗಾರಿಗೆ ದಿನಗಳಲ್ಲಿ ಅಂದರೆ ಶ್ರಾವಣಮಾಸದ ಮಂಗಳವಾರದಂದು ಈ ಕನ್ನಿರಮ್ಮ ಅಥವಾ 'ಮದಗದಮ್ಮ' ಕೂಡ್ಲಿಗಿಯ ದಲಿತರ ಕೇರಿಯಲ್ಲಿದ್ದು, ಅವಳನ್ನು ಆ ಬಂಧುಗಳು ತಮ್ಮ ಅಧಿದೇವತೆ ರೂಪದಲ್ಲಿ ಶ್ರಾವಣ ಮಂಗಳವಾರದಂದು ಇಡಿ ಕೇರಿ ಜನರೆಲ್ಲ ಹೋಳಿಗೆ ಮಾಡಿ ಎಡೆ ಅರ್ಪಿಸಿ ಹಲಗೆ, ತಮಟೆಗಳಿಂದ ಪೂಜಾಮಂಟಪದಲ್ಲಿ ಅವಳನ್ನು ತಲೆಮೇಲೆ ಹೊತ್ತು ಸುಮಾರು ಮೂರು ಕಿ.ಮೀ. ನಡಿಗೆ ಸವಿಸಿ ದೊಡ್ಡಕೆರೆ ತಲುಪಿ ಗಂಗಪೂಜೆ ಕಾರ್ಯ ಮುಗಿಸಿ ಅವಳನ್ನು ವಿಜೃಂಭಣೆಯಿಂದ ಊರಕಡೆ ಹೊತ್ತು ತರುತ್ತಾರೆ. ಇಂತಹ ಜನಪದೀಯ ಸಂಸ್ಕೃತಿಯ ಸೊಗಡು ಪಂಜು ಮೆರವಣಿಗೆಯೊಂದಿಗೆ ಮೆರೆದವರಲ್ಲಿ ಮೆರಗು ನೀಡುತ್ತದೆ. ಕೋಡಿ ಬೀಳುವ ಸಂದರ್ಭಕ್ಕಾಗಿ ಜನರ ಸಂತೋಷದಿಂದ ದೇವಿಯಲ್ಲಿ ಮಳೆಯ ವಿಚಾರವಾಗಿ ಪ್ರಶ್ನೆ ಕೇಳಿ ತಮ್ಮ ದುಗುಡ ದೂರ ಮಾಡಿಕೊಳ್ಳುತ್ತಾರೆ. ಈ ಪದ್ಧತಿ ಇಡಿ ಪ್ರಮುಖ ದೇವಿಯರ ಹೊರಡಿಸಿದಾಗಲೂ ಇಂತಹ ಸಂದರ್ಭಗಳು ಕಾಣಸಿಗುವುದು ಸಾಮಾನ್ಯವಾಗಿದೆ. ಇದು ಕೇವಲ ಕೂಡ್ಲಿಗಿ ಮಾತ್ರವಲ್ಲದೆ ಅಮರದೇವರಗುಡ್ಡ, ಅಮ್ಮನಕೇರಿ, ಮೊರಬ, ಶಿವಪುರ, ಬಡೆಲಡಕು, ಬೀರಲಗುಡ್ಡ, ತುಪ್ಪಾಕನಹಳ್ಳಿ ಈಚಲಬೊಮ್ಮನಹಳ್ಳಿ ಮುಂತಾದೆಡೆಗಳಲ್ಲಿ ಕಾಣಸಿಗುತ್ತದೆ.

## ಕೆರೆ ಏರಿ ನಿರ್ಮಾಣ

ಏರಿಯು ಕೆರೆಯ ಒಂದು ಪ್ರಮುಖ ಅಂಗ. ಕೆರೆಗಳ ಏರಿ ಬಹುತೇಕ ಮಣ್ಣಿನಿಂದ ರಚನೆಗೊಂಡಿರುತ್ತದೆ. ಕೆರೆಯ ಬುನಾದಿ ಈ ಏರಿ ಮಣ್ಣನ್ನು ಹಾಕಿ ನೀರಿನಿಂದ ನೆನೆಸಿ ಗಟ್ಟಿಮಾಡಿ ಅದರ ಮೇಲೆ ಏರಿಯನ್ನು ಹಂತವಾಗಿ ನಿರ್ಮಿಸಲು ಮಣ್ಣನ್ನು ಹೊಂದಿಸಿರುತ್ತಾರೆ. ಹೀಗೆ ಮಾಡುವುದರಿಂದ ಏರಿ ಬಲಗೊಳ್ಳುತ್ತದೆ. ಕೆರೆ ಏರಿಯ ಅಡಿಪಾಯ ವಿಶಾಲವಾಗಿದ್ದು ಅದು ಮೇಲಕ್ಕೆ ಹೋದಂತೆ ಕಿರಿದಾಗುತ್ತಾ ಹೋಗಿರುತ್ತದೆ. ಕೆರೆಯ ಏರಿಯ ನೀರಿನ ಭಾಗಕ್ಕೆ ಸಾಮಾನ್ಯವಾಗಿ ಕಲ್ಲಿನ ಜೋಡಣೆಯನ್ನು ಹೊಂದಿಸಿರುತ್ತಾರೆ. ಇದಕ್ಕೆ ಕಟ್ಟುವಾಡ ಅಥವಾ ಕಟವಾಡ ಎಂದು ಕರೆಯುತ್ತಾರೆ. ಕಲ್ಲಿನ ಜೋಡಣೆಯು ಸರಿಯಾಗಿದ್ದರೆ ಏರಿಗೆ ಆಗುವ ಅಪಾಯ ಮತ್ತು ಮಣ್ಣು ಕೊರೆಯುವ, ಕುಸಿಯುವ ಸಮಸ್ಯೆ ತಡೆಯಬಹುದು. ಹಾಗೆ ಏರಿಯ ಎರಡು ಭಾಗದ ಇಳಿಜಾರು ನೀರಿನ ಒತ್ತಡ ತಡೆದು ಏರಿಗೆ ಬಲ ನೀಡುವಲ್ಲಿ ಸಹಾಯವಾಗಿರುತ್ತದೆ. ಕೆರೆಯ ಏರಿಯು ಅಂಕುಡೊಂಕಾಗಿಯೇ ಕಟ್ಟಿರುತ್ತಾರೆ. ಕಾರಣ ನೀರಿನಿಂದ ಏರಿಗೆ ಬೀಳುವ ಒತ್ತಡವು ಸಮನಾಗಿ ಹಂಚಿಕೆಯಾಗುತ್ತದೆ.

ಆಕಸ್ಮಾತ್ ಏರಿ ಒಡೆದರೆ ಸುಲಭವಾಗಿ ಸರಿಪಡಿಸಲು ಸಹಾಯಕವಾಗಿದೆ. ಏರಿಮೇಲೆ ಒಂದು ವಾಹನ ಚಲಿಸುವಷ್ಟು ರಸ್ತೆಗೆ ಅವಕಾಶ ಮಾಡಿಕೊಡಲಾಗಿರುತ್ತದೆ. ಇದು ಸಂಚಾರಕ್ಕೆ ಅನುವುಮಾಡಿಕೊಡುತ್ತದೆ.[೨೧]

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಇದರ ಅನ್ವಯದಂತೆ ಕೂಡ್ಲಿಗಿ ಮತ್ತು ಕೊಟ್ಟೂರು, ಕೆರೆ ನಿರ್ಮಾಣ ಆಗಿದೆ ಎಂಬುದು ತಿಳಿಯುವುದಲ್ಲದೆ ಹೋಬಳಿಯ ಹಲವು ಗ್ರಾಮದ ಕೆರೆ–ಕಟ್ಟೆಗಳು, ಆಯಾ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ನಿರ್ಮಾಣವಾಗಿರುವುದು, ಅವುಗಳ ಅಧ್ಯಯನದಿಂದ ತಿಳಿದುಬರುತ್ತದೆ. ಕೆಲವು ಕೆರೆಗಳಿಗೆ ತೂಬುಗಳು ಹೊಂದಿದ್ದರೆ ಕೆಲವು ಎರಡು ಹೊಂದಿಗೆ. ಉದಾಹರಣೆಗೆ: ಹನಸಿ ಕೆರೆ.

ಕೆರೆಗಳ ಮಾಹಿತಿ ಆಧಾರದಲ್ಲಿ ಕೂಡ್ಲಿಗಿ ತಾಲ್ಲೂಕು ಮತ್ತು ಹೋಬಳಿ ಅವಲೋಕಿಸಿದಾಗ ೧೮೦೭ರಲ್ಲಿ ಥಾಮಸ್ ಮನ್ರೋ ನಡೆಸಿದ ಸಮೀಕ್ಷೆ ಪ್ರಕಾರ ಬಳ್ಳಾರಿ, ಕಂಪ್ಲಿ, ಹರಪನಹಳ್ಳಿ, ಕೂಡ್ಲಿಗಿ ಹಾಗೂ ಹೂವಿನಹಡಗಲಿ ತಾಲ್ಲೂಕುಗಳು ಬೇಸಾಯದಲ್ಲಿದ್ದ ಭೂಮಿ ೯೩೧.೦೬೮ ಎಕರೆಗಳು, ನೀರಾವರಿ ಪ್ರದೇಶ ೪೧.೮೧೫ ಎಕರೆ ಎನ್ನಲಾಗುತ್ತದೆ. ೧೮೭೦ರಲ್ಲಿ ೨೦೦ಕ್ಕೂ ಹೆಚ್ಚು ಎಕರೆ ನೀರಾವರಿ ಇದ್ದ ಕೆರೆಯಲ್ಲಿ ಕೇವಲ ೧೫ ಮಾತ್ರ. ಅವುಗಳಲ್ಲಿ ಕೂಡ್ಲಿಗಿ ತಾಲ್ಲೂಕಿನ ಕೂಡ್ಲಿಗಿಕೆರೆ, ಕೊಟ್ಟೂರುಕೆರೆ, ಹನಸಿಕೆರೆ, ಉಜ್ಜನಿಕೆರೆಗಳ ನೀರಾವರಿ ವಿವರಣೆ ನೀಡಲಾಗಿದೆ.

| **ಊರು** | **ಹಿಂದಿದ್ದ ಎಕರೆ ಪ್ರದೇಶ** | **ಎತ್ತರ** | **ಸಾಮರ್ಥ್ಯ** |
|---|---|---|---|
| ೧. ಕೂಡ್ಲಿಗಿ | ೨೮೪ | ೧೬ ಅಡಿ | ೪೦.೬೦(MCFT) |
| ೨. ಕೊಟ್ಟೂರು | ೬೧೦ | ೧೨ ಅಡಿ | ೧೭೩.೬೦(MCFT) |
| ೩. ಹನಸಿ | ೪೬೩ | – | – |
| ೪. ಉಜ್ಜನಿ | ೪೨೬ | – | – |

ಒಟ್ಟಾರೆಯಾಗಿ ಕೂಡ್ಲಿಗಿ ತಾಲ್ಲೂಕು ಮತ್ತು ಹೋಬಳಿಯ ಕೆರೆಗಳನ್ನು ಅಧ್ಯಯನ ದೃಷ್ಟಿಯಲ್ಲಿ ನೋಡಿದಾಗ ಮನ್ರೋ ಹೇಳುವ ಪ್ರಕಾರ ಕೂಡ್ಲಿಗಿ, ಕೊಟ್ಟೂರು ಕೆರೆಗಳು ಶತಮಾನಗಳಷ್ಟು ಹಿಂದಿನವು ಎಂಬುದು ಮಾಹಿತಿ ಮೂಲಕ ತಿಳಿದುಬರುತ್ತದೆ.[೨೨]

**ಕಟ್ಟೆ**

ನೀರನ್ನು ಶೇಖರಿಸಿಡುವ ಕಿರು ಜಲಾಶಯವೇ ಕಟ್ಟೆ, ಕೆರೆಕಟ್ಟೆ ಎಂದು ಜೋಡಿ ಪದವಾಗಿಯು ಬಳಕೆಯಲ್ಲಿದೆ. ಕಟ್ಟೆ ಎಂದರೆ ಕೆರೆ ಎಂಬ ಅರ್ಥವನ್ನು ಸ್ಪಷ್ಟಪಡಿಸುತ್ತದೆ. ೧೮೦೦ರಲ್ಲಿ ಮೈಸೂರಿನ ಉದ್ದಗಲಕ್ಕೂ ಪ್ರವಾಸ ಮಾಡಿದ ಫ್ರಾನ್ಸಿಸ್ ಬುಕಾನನ್ ದನಕರುಗಳಿಗೆ ಕುಡಿಯುವ ನೀರನ್ನು ಒದಗಿಸುವ ಜಲಾಶಯವೇ ಕಟ್ಟೆ ಎಂದು ಭೂಮಿಗೆ ನೀರು ಹಾಯಿಸಲು ಉಪಯೋಗಿಸುವ ದೊಡ್ಡ ಜಲಾಶಯವೇ ಕೆರೆ ಎಂದು ಹೇಳುತ್ತಾನೆ. ಆದರೆ ಈ ವರ್ಗೀಕರಣಕ್ಕೆ ನಿರ್ದಿಷ್ಟ ಗಾತ್ರವನ್ನು ಹೇಳಿಲ್ಲ, ಏನೇ ಇರಲಿ ಕಟ್ಟೆ ಎಂಬುದು ಸಣ್ಣ ಕೆರೆ ಎಂಬರ್ಥದಲ್ಲಿ ಜನರ ಬಾಯಲ್ಲಿ ಇದೆ. ಇದು ಜಾನುವಾರುಗಳು ಕುಡಿಯಲು ಬಳಸುವ ಜಲಾಶಯ ಎಂಬರ್ಥದಲ್ಲಿಯೇ ವ್ಯಾಪಕವಾಗಿ ಬಳಕೆಯಲ್ಲಿದೆ.[೨೩]

ಗುಡ್ಡ ಕಾಡುಗಳಿಂದ ಹರಿದು ಬರುವಾಗ ಬಂದ ಮಣ್ಣು ಕಟ್ಟೆಯಲ್ಲಿ ಉಳಿದು ನೀರು ಮುಂದಕ್ಕೆ ಹೋಗುತ್ತಿತ್ತು. ಇದು ಹೂಳನ್ನು ತಡೆಗಟ್ಟುವಲ್ಲಿ ನಮ್ಮ ಪೂರ್ವಜರು ಅನುಸರಿಸುತ್ತಿದ್ದ ಅತ್ಯುತ್ತಮ ತಂತ್ರಜ್ಞಾನವೆಂದು ಹೇಳಬಹುದು.[೨೪] ಕರ್ನಾಟಕದಲ್ಲಿ ಕೆರೆ ಕಟ್ಟೆಗಳಿಲ್ಲದ ಊರುಗಳೇ ಇಲ್ಲವೆಂದು ಹೇಳಬಹುದು. ಕಟ್ಟೆಗಳನ್ನು

ಸಾಮಾನ್ಯವಾಗಿ ಅರಣ್ಯದ ಬಯಲಿನಲ್ಲಿ ಹಳ್ಳದ ಹತ್ತಿರ ಪ್ರಕೃತಿದತ್ತವಾದ ತಗ್ಗು ಪ್ರದೇಶಗಳಲ್ಲಿ ನಿರ್ಮಿಸುತ್ತಿದ್ದರು. ದನಕರುಗಳು ಕಾಡಿನಲ್ಲಿ ಮೇಯ್ದು ಸಂಜೆ ಸಮಯದಲ್ಲಿ ಕಟ್ಟೆ ನೀರನ್ನು ಕುಡಿದು ಮನೆಗೆ ಹಿಂದಿರುಗುವ ಉದ್ದೇಶ ಇವುಗಳ ನಿರ್ಮಾಣವಾಗಿತ್ತು. ಈಗಲೂ ಹಳ್ಳಿಗಳಲ್ಲಿ ಗೋಕಟ್ಟೆ ಕಾಣುಬಹುದು.

ಹಾಗಾಗಿ ಹೋಬಳಿಯಲ್ಲಿ ಅನೇಕ ಕಟ್ಟೆಗಳು, ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದ್ದು ಈ ಕಟ್ಟೆಗಳನ್ನು ದೈವಸೂಚಕವಾಗಿ, ಸಸ್ಯಸೂಚಕ, ಜಲಸೂಚಕ, ವ್ಯಕ್ತಿಸೂಚಕ ಮುಂತಾದ ನಾಮಸೂಚಕವಾಗಿ ಆಯಾ ಗ್ರಾಮಗಳಲ್ಲಿ ಕರೆಯುತ್ತಾರೆ. ಉದಾಹರಣೆಗೆ: ಕೂಡ್ಲಿಗಿಯ ಉಡಚಲಮ್ಮಕಟ್ಟೆ(ತಿರುಗಿಣಿಹಳ್ಳ, ದೊಡ್ಡಳ) ಪಕ್ಕದಲ್ಲಿ ನಿರ್ಮಿಸಲಾಗಿದೆ. ಹಾಗೆ ಮಲ್ಲಕ್ಕನಕಟ್ಟೆ, ಗೌಡರಕಟ್ಟೆ, ಐಯ್ಯನಕಟ್ಟೆ ಹೀಗೆ ಹಲವಾರು ಹೆಸರುಗಳಿಂದ ಗುರ್ತಿಸಲ್ಪಡುತ್ತವೆ. ಅಷ್ಟೇ ಅಲ್ಲದೆ ಸರ್ಕಾರವು ಇತ್ತೀಚೆಗೆ ಗೋಕಟ್ಟೆಗಳ ಜೊತೆಗೆ ಚೆಕ್‌ಡ್ಯಾಂಗಳ ನಿರ್ಮಾಣ, ತಾಲ್ಲೂಕು ಮತ್ತು ಹೋಬಳಿ ಭಾಗದಲ್ಲಿ ನಿರ್ಮಾಣ ಮಾಡುತ್ತಿರುವುದು ಕಂಡುಬರುತ್ತಿದೆ.

**ಟಿಪ್ಪಣಿಗಳು**

೧. ಎಂ.ಎನ್. ಪ್ರಭಾಕರ್, ದೇವಾಲಯವಾಸ್ತು ವಿಷಯಾನುಪೂರ್ವಿ, ಟಿಪ್ಪಣಿಗಳು, ಸಂ.೬, ಪುಟ.೫೨

೨. ಕೂ.ಸ. ಅಪರ್ಣ, ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ ೧

೩. ಅದೇ, ಪುಟ ೩

೪. ಅದೇ, ಪುಟ ೮

೫. ಕುಂ.ಬಾ. ಸದಾಶಿವಪ್ಪ, ಹಲವು ಹನ್ನೊಂದು ಹರಪನಹಳ್ಳಿ, ಪುಟ ೬೨.

೬. ಹೆಚ್. ತಿಪ್ಪೇಸ್ವಾಮಿ, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪುಟ ೭೫

೭. ಕುಂ.ಬಾ.ಸ, ಪೂರ್ವೋಕ್ತ, ಪುಟ ೬೫

೮. ಅದೇ, ಪುಟ ೬೪

೯. ವಾಸುದೇವ ಬಡಿಗೇರ, ಎಸ್.ವೈ. ಸೋಮಶೇಖರ್, ಎಂ. ಕೊಟ್ರೇಶ್ ಮತ್ತು ಕೆ.ಎಂ. ಸುರೇಶ್, ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಪುಟ ೧೬೪

೧೦. ಅದೇ, ಪುಟ ೧೬೪

೧೧. ಅದೇ, ಪುಟ ೧೬೮

೧೨. ಅದೇ, ಪುಟ ೧೭೦

೧೩. ಅದೇ, ಪುಟ ೧೭೧

೧೪. ಅದೇ, ಪುಟ ೧೮೯

೧೫. ಅದೇ, ಪುಟ ೧೮೯

೧೬. ಅದೇ, ಪುಟ ೧೯೧

೧೭. ಅದೇ, ಪುಟ ೧೯೨

೧೮. ಅದೇ, ಪುಟ ೧೯೩

೧೯. ಅದೇ, ಪುಟ ೧೯೪

೨೦. ಅದೇ, ಪುಟ ೧೯೫

೨೧. ಅದೇ, ಪುಟ ೧೯೭

೨೨. ಅದೇ, ಪುಟ ೧೯೮

೨೩. ಅದೇ, ಪುಟ ೨೦೨

೨೪. ಜಿ.ಎಂ. ನಾಗಯ್ಯ, ಬಳ್ಳಾರಿ ಜಿಲ್ಲೆಯ ಶಾಸನಗಳು, ಪುಟ ೫-೬

೨೫. ಅದೇ, ಪುಟ ೧೬

೨೬. ತಿಪ್ಪೇಸ್ವಾಮಿ ಡಿ, ಕೋಗಳಿನಾಡಿನ ಶಾಸನಗಳ ಅಧ್ಯಯನ, ಪುಟ ೧೫

೨೭. ಅದೇ, ಪುಟ ೧೬

೨೮. ಕರ್ನಾಟಕ ಶಾಸನಗಳ ಸಂಪುಟ-೨, ಬಳ್ಳಾರಿ ಜಿಲ್ಲೆ ಶಾಸನಗಳು, ಪುಟ ೧೫೧(ಸಂ. ೪೬೮)

೨೯. ಅದೇ, ಪುಟ ೧೫೬(ಸಂಖ್ಯೆ ೪೭೯)

೩೦. ಅದೇ, ಪುಟ ೧೫೭(ಸಂಖ್ಯೆ ೪೮೦)

೩೧. ಅದೇ, ಪುಟ ೧೫೪

೩೨. ಅದೇ, ಪುಟ ೧೫೨

೩೩. ಅದೇ, ಪುಟ ೭೫

೩೪. ಅದೇ, ಪುಟ ೭೯

೩೫. ಆರ್. ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪುಟ ೨

೩೬. ಅದೇ, ಪುಟ ೪೩

೩೭. ಅದೇ, ಪುಟ ೪೯

೩೮. ಅದೇ, ಪುಟ ೨೭

೩೯. ಎಂ. ಕೊಟ್ರೇಶ್, ಕೋಟೆ-ಕೊತ್ತಲಗಳು: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಪುಟ ೧೪

೪೦. ಎಸ್.ಕೆ. ಜೋಶಿ, ಕರ್ನಾಟಕದ ಕೋಟೆ-ಕೊತ್ತಲಗಳು, ಪುಟ ೧

೪೧. ಚನ್ನಬಸಪ್ಪ ಎಸ್. ಪಾಟೀಲ್, ಕರ್ನಾಟಕ ಕೋಟೆಗಳು ೧

೪೨. ಎಂ. ಕೊಟ್ರೇಶ್, ಪೂರ್ವೋಕ್ತ, ಪುಟ ೧೬

೪೩. ಅದೇ, ಪುಟ ೨೩

೪೪. ಚನ್ನಬಸಪ್ಪ ಎಸ್. ಪಾಟೀಲ್, ಪೂರ್ವೋಕ್ತ ೨

೪೫. ಎಂ. ಕೊಟ್ರೇಶ್, ಪೂರ್ವೋಕ್ತ, ಪುಟ ೬೫

೪೬. ಜಿ.ಎಸ್. ಮಠ, ಸುಧಾರಿತ ನೀರಾವರಿ ಪದ್ಧತಿಗಳು, ಪುಟ ೪

೪೭. ಸಿ.ಎಸ್. ವಾಸುದೇವನ್, ಹಂಪಿ ಪರಿಸರದ ಕೆರೆಗಳು, ಪುಟ ೧

೪೮. ರಾಜರಾಮ್ ಹೆಗಡೆ(ಸಂ), ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪುಟ ೧೧

೪೯. ಬಸವರಾಜ ಕುಂಚೂರು, ನಮ್ಮೂರ ಕೆರೆಗಳು, ಪುಟ ೪೨

೫೦. ಸಿ.ಎಸ್. ವಾಸುದೇವನ್, ಪೂರ್ವೋಕ್ತ, ಪುಟ ೨೩

೫೧. ಅದೇ, ಪುಟ ೪೩

೫೨. ಅದೇ, ಪುಟ ೪೯

೫೩. ಜಿ.ಎಸ್. ದೀಕ್ಷಿತ್, ಜಿ.ಆರ್. ಕುಪ್ಪುಸ್ವಾಮಿ ಮತ್ತು ಎಸ್.ಕೆ. ಮೋಹನ್., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ ೮೭–೮೮

೫೪. ಬಸವರಾಜ ಕುಂಚೂರು, ಪೂರ್ವೋಕ್ತ, ಪುಟ ೬೭

AEEMI ಉಪ ವಿಭಾಗ, ಕೂಡ್ಲಿಗಿ, ಬಳ್ಳಾರಿ(ಜಿ), ಅವರಿಂದ ಪಡೆದ ಮಾಹಿತಿ

# ಅಧ್ಯಾಯ ೪

# ನಂಬಿಕೆ ಮತ್ತು ಆಚರಣೆ

ಮನುಷ್ಯ ಆದಿಮಾನವ ಕಾಲದಿಂದಲೂ ನಂಬಿಕೆ ಮತ್ತು ತತ್ಸಂಬಂಧ ಆಚರಣೆಗಳನ್ನು ರೂಢಿಯಾಗಿಸಿಕೊಂಡಿರುವುದು ಕಾಣುತ್ತಲೇ ಬಂದಿದ್ದೇವೆ. ದೇವತೆಗೂ, ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು. ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆಗಳು ಎನ್ನಲಾಗಿದೆ.[೧] ನಂಬಿಕೆ ಆಚರಣೆಯ ಬೆನ್ನೆಲುಬು, ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆ ಹುಟ್ಟುವ ಮುನ್ನ ಅಥವಾ ನಂತರ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಇವು ಮುಗಿದು ಹೋದರೂ ಆಚರಣೆ ಮುಂದುವರಿಯುತ್ತಾ ಹೋಗುವುದನ್ನು ಕಾಣುತ್ತೇವೆ.

ಮತ ಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವಶಕ್ತಿಗಳ ಪ್ರೀತ್ಯರ್ಥವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ ಕರ್ಮವಿಧಿಗಳಿಗೆ ಈ ಹೆಸರಿದೆ. "ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ ಸಾಂಪ್ರದಾಯಿಕವಾಗಿ ಒಪ್ಪಿತವಾಗಿರುವ ಭೂತ, ವರ್ತಮಾನ ಮತ್ತು ಭವಿಷತ್ಯತ್ ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ ಎಂದು ಕರೆಯಬಹುದು. ನಂಬಿಕೆ ಮತ್ತು ಆಚರಣೆಗಳು ಒಂದು ಪ್ರದೇಶವು ಅಲ್ಲಿ ವಾಸಿಸುವ ಸಮುದಾಯಗಳಲ್ಲಿ ಜೀವನದ ಭಾಗವಾಗಿರುತ್ತವೆ.

ನಂಬಿಕೆ ಭೌತಿಕ ಸ್ವರೂಪದ ಆಚರಣೆಯಾಗಿದೆ. ಮಾನವ ಬದುಕಿನ ಶ್ರೇಯಸ್ಸಿಗಾಗಿ ಅಥವಾ ರೋಗ ನಿವಾರಣೆಗಾಗಿ ಇಲ್ಲವೇ ತನ್ನ ದಿನನಿತ್ಯದ ಕಾರ್ಯ ಚಟುವಟಿಕೆಗಳು ಸುಗಮವಾಗಿ ನೆರವೇರಿಸಿಕೊಳ್ಳಲು ತನಗೆ ಸಂಬಂಧಿಸಿದ ಕೆಲವು ವಿಧಿ–ವಿಧಾನ, ಪೂಜೆ, ಜಾತ್ರೆ, ಪರಸೆ, ಬಲಿ ಕಾರ್ಯದ ನಂಬಿಕೆ ಮತ್ತು ಆಚರಣೆ ಮಾಡುತ್ತಾ ಬಂದಿದ್ದಾನೆ. ಮಾನವನಷ್ಟೇ ಪಾರಂಪರಿಕ ಹಿರಿಮೆ, ಮಾನವ ಸಂಸ್ಕೃತಿಯದು. ಮಾನವನ ದೈನಂದಿನ ಬದುಕಿಗೆ ಗಾಳಿ, ಬೆಳಕು, ನೀರು, ಆಹಾರ, ಬಟ್ಟೆ, ವಸತಿ ಎಷ್ಟು ಮುಖ್ಯವೋ ನಂಬಿಕೆಯೂ ಅಷ್ಟೇ ಪ್ರಮುಖವಾಗಿದೆ.[೨] ನಂಬಿಕೆ ಆಚರಣೆಗಳು ಭೂಮಿಯ ಯಾವ ಪ್ರದೇಶವನ್ನು ಬಿಟ್ಟಿಲ್ಲ ಅವು ಸ್ಥಳೀಯವಾಗಿ ಭಿನ್ನರೂಪದಲ್ಲಿ ಗೋಚರಿಸುತ್ತವೆ. ಹಾಗೆ ಕೂಡ್ಲಿಗಿ ಹೋಬಳಿ ಪರಿಸರ ಅನೇಕ ಜನಸಮುದಾಯಗಳಿಂದ ರಚಿತವಾಗಿದೆ. ನಾಯಕ, ಲಿಂಗಾಯತ, ಕುಂಬಾರ, ಕಮ್ಮಾರ, ಬಡಿಗ, ಅಕ್ಕಸಾಲಿಗ, ಚಮ್ಮಾರ, ಬಾರಿಕ, ಬ್ರಾಹ್ಮಣ ಇತರೇ ಅಲ್ಪಸಂಖ್ಯಾತರಿಂದ ಅವರದೇ ಆದ ನಂಬಿಕೆ ಮತ್ತು ಆಚರಣೆಗಳ

ನೆಲೆಯಲ್ಲಿ ಬದುಕುತ್ತಿದ್ದಾರೆ. ಇಲ್ಲಿನ ಬಹುಸಂಖ್ಯಾತ ನಾಯಕ ಜನಾಂಗ ಕೃಷಿ–ಕೂಲಿಯಲ್ಲಿ ತೊಡಗಿದರೆ ಉಳಿದವರು ಕೃಷಿ, ವ್ಯಾಪಾರ ಇತರೆ ಕೆಲಸಕಾರ್ಯದಲ್ಲಿ ತೊಡಗಿದ್ದಾರೆ. ಮುಂಗಾರು ಈ ಪ್ರದೇಶದ ಜೀವಾಳ. ಮುಗಿಲಹನಿ ಭೂಮಿಗೆ ಬಿದ್ದೊಡನೆ ಕೃಷಿ ಚಟುವಟಿಕೆ ಗರಿಗೆದರುತ್ತವೆ. ಜೊತೆಗೆ ಈ ಭಾಗದಲ್ಲಿ ಕೆಲವು ರೂಢಿಗತವಾಗಿ ಬಂದ ಆಚರಣೆಗಳು ಪ್ರಸ್ತುತ ದಿನಮಾನದಲ್ಲಿ ಕಂಡುಬರುತ್ತವೆ. ಮಳೆ ಬಾರದಿದ್ದರೆ ಕಪ್ಪೆ ಮದುವೆ, ಕತ್ತೆ ಮದುವೆ ಮಾಡುವ ಪದ್ಧತಿ ಇದೆ. ಮಳೆರಾಯನ ಕರೆಯುವ ಪರಿಯಾಗಿ 'ಗೂರ್ಜಿ' ಹೊತ್ತು ಓಣಿ ಓಣಿ ಸುತ್ತುವುದರ ಜೊತೆ ಹೊತ್ತವನಿಗೆ ಪ್ರತಿ ಮನೆಯಲ್ಲಿ ಸಗುಣಿಯ ಮೂರು ಗೋಲದ ಸಹಿತ ನೀರು ಎರೆಯುವ ಆಚರಣೆ ಇದೆ. ಹೀಗೆ ಮಾಡಿದರೆ ಮಳೆ ಬರುತ್ತದೆ ಎಂಬ ಬಲವಾದ ನಂಬಿಕೆ ಇದೆ. ಮತ್ತೊಂದು ವಿಧಾನದ ಪ್ರಕಾರ ಹತ್ತು ವರ್ಷದ ಕೆಳಗಿನ ಬಾಲಕರನ್ನು ಬೆತ್ತಲೆಯಾಗಿಸಿ ಅವನ ಮೇಲೆ ನೀರು ಸುರಿದು ಕೆಲವು ವಿಶೇಷ ಮರವನ್ನು ಸುತ್ತಿಸುತ್ತಾರೆ. ಹೀಗೆ ಮಾಡುವುದರಿಂದಲೂ ಮಳೆ ಬರುತ್ತದೆ ಎನ್ನುತ್ತಾರೆ. ಮಳೆಯೇ ಇಲ್ಲವಾದರೆ ಸ್ಮಶಾಸ ಸೋಸುವ ಪದ್ಧತಿ ಕೂಡ ಕಂಡುಬರುತ್ತದೆ.

ಸಕಾಲದಲ್ಲಿ ಮಳೆಯಾಗಿ ಕೆರೆ–ಕಟ್ಟೆಗಳು ತುಂಬಿದರೆ ಅದಕ್ಕೂ ಕೆಲವು ಆಚರಣೆ ಕಾರ್ಯ ನಡೆಯುತ್ತದೆ. ಗಂಗೆಶಾಂತಿ, ಬಲಿಪೂಜೆ, ಗ್ರಾಮದೇವಿಯನ್ನು ಹೊಳೆಗೆ ಹೊಂಡಿಸುವುದು. ಗ್ರಾಮದ ಸಮಸ್ತ ಗ್ರಾಮದ ಜನರೆಲ್ಲ ಭಾಗವಹಿಸುವುದು ಕಾಣುತ್ತೇವೆ. ಶ್ರಾವಣಮಾಸದಲ್ಲಿ ಹಿಂದೂಗಳಲ್ಲಿ ಮನೆದೇವರ ಪರ್ವ, ಪೂಜೆ, ಅಭಿಷೇಕ, ಹರಕೆ ತೀರಿಸುವ ಆಚರಣೆಗಳು ತಿಂಗಳವರೆಗೆ ನಡೆಯುವ ಆಚರಣೆಗಳಿವೆ. ಪುರುಷದೇವರುಗಳಿಗೆ ಈ ಭಾಗದಲ್ಲಿ ಪರ್ವಗಳು, ಶ್ರಾವಣ, ಕಾರ್ತಿಕ ಮಾಸದಲ್ಲಿ ಪರ್ವಉತ್ಸವ, ದೀಪೋತ್ಸವ, ಬ್ಯಾಟಿ ಕಡಿಯುವುದು(ಹರಿಕೆಯ ಬಲಿ) ಕೆಲವು ವಿಶೇಷ ದಿನಗಳಲ್ಲಿ ನಡೆಯುತ್ತವೆ. ಇಲ್ಲಿ ಪುರುಷ ದೈವದ ದಿನ ಮತ್ತು ಮಾಸಗಳು, ಸ್ತ್ರೀದೇವಿಯ ದಿನಮಾಸಗಳಿಗೆ ಅನುಗುಣವಾಗಿ ನಡೆಯುತ್ತವೆ.

ಸಾಮಾಜಿಕವಾಗಿ ಹಲವಾರು ಆಚರಣೆ, ನಂಬಿಕೆ ರೂಢಿಯಲ್ಲಿವೆ. ಚಿಕ್ಕಮಕ್ಕಳು ೧ ವರ್ಷದೊಳಗಿನ ಯಾವುದಾದರೂ ಯಾರ ಮನೆಗೆ ಎತ್ತಿಕೊಂಡು ಹೋದರೆ ಆ ಮಗುವಿನ ನೆತ್ತಿಮೇಲೆ ಹೆಣ್ಣೆಹಾಕುವ ಪರಿಪಾಠವಿದೆ. ಇದು ಬಂಜೆತನ ನಿವಾರಿಸುತ್ತದೆ ಎಂಬ ನಂಬಿಕೆ ಹೊಸದಾಗಿ ಮದುವೆಯಾದ ಹೆಣ್ಣುಮಗಳು ಬೇರೆಯವರ ಮನೆಗೆ ಹೋದಾಗ ಅವಳಿಗೆ ಮಡಿಲಕ್ಕಿ ಹಾಕಿ ಕಳಿಸುವ ಪದ್ಧತಿ ಆಚರಣೆ ಈ ಭಾಗದಲ್ಲಿ ಕಾಣುತ್ತೇವೆ.

ನವದಂಪತಿಗಳು ತೇರು ಎಳೆಯಬೇಕು. ನಾಗರಪಂಚಮಿಯಂದು ಜೊತೆಯಾಗಿ ಹಾಲೆರೆಯಬೇಕು, ಆಷಾಡ ಅಥವಾ ಸುನೆವು ದಿನಗಳಲ್ಲಿ ಸೊಸೆ ಮನೆಯಲ್ಲಿ ಇರಬಾರದು ಎಂಬಲ್ಲ ಆಚರಣೆಗಳಿವೆ. ಮಕ್ಕಳಿಗೆ ದೃಷ್ಟಿಯಾದರೆ ಅಜ್ಜಿಯಂದಿರು ಅಥವಾ ತಾಯಂದಿರು ಹೋಕಳಿಯಲ್ಲಿ ಅನ್ನಮುಷ್ಠಿಮಾಡಿ ಅದರಲ್ಲಿ ಉರಿಯುವ ಜ್ಯೋತಿ ಇಟ್ಟು ನಿವಾಳಿಸಿದರೆ ಅದನ್ನು ಮೂರು ದಾರಿಯಲ್ಲಿ ಹಾಕಿದರೆ ದೃಷ್ಠಿ ಇಳಿಯುತ್ತದೆ ಎಂಬ ನಂಬಿಕೆ ಬಲವಾಗಿದೆ.

ಹಬ್ಬಗಳಲ್ಲಿ ಹೋಳಿಗೆ ಮಾಡುವಾಗ 'ಹಿಟ್ಟು' ಉಳಿದರೆ ಗಂಡಾಗುವುದೆಂದು 'ಕಣಕ' ಉಳಿದರೆ ಹೆಣ್ಣಾಗುತ್ತದೆಂದು ಎಂಬಲ್ಲ ನಂಬಿಕೆ ಬೆಳೆದುಬಂದಿವೆ. ರಾತ್ರಿಯಲ್ಲಿ ಹಣ, ಮೊಸರು, ಹರಿಸಿಣ, ಕುಂಕುಮ ಹೊರಗೆ ಕೊಡಬಾರದು ಬಡತನ ಬರುತ್ತದೆ. ವಲೆ ಜೋರಾಗಿ ಕೂಗಿದರೆ ಬೀಗರು ಬರುವರೆಂದು, ಚಿಲಕ ಅಲುಗಾಡಿಸಿದರೆ ಸಾಲವಾಗುತ್ತದೆಂದು ಹೀಗೆ ನಂಬಲು ಅಸಾಧ್ಯವಾದ ಆಚರಣೆಗಳೆಲ್ಲ ಈ ಭಾಗಗಳಲ್ಲಿ

ನೋಡುತ್ತೇವೆ. ಈ ಪರಿಸರದಲ್ಲಿ ದೈವ ವಿಚಾರವಾಗಿ ಹರಳಿಮರ, ಬೇವಿನಮರ, ಬನ್ನಿಮರ, ಅಶ್ವತವೃಕ್ಷ, ಎಕ್ಕಿಗಿಡ, ಬಿಲ್ವಪತ್ರಿಮರ, ತುಳಸಿಗಿಡ, ಗರಿಕೆಹುಲ್ಲು ಈ ಎಲ್ಲವೂ ಪೂಜನೀಯ ಸ್ಥಾನದಲ್ಲಿ ನೋಡಲಾಗುತ್ತದೆ.

**ಆಚರಣೆಗಳು**

ನಿತ್ಯ ಜೀವನ ಮತ್ತು ವೈಯಕ್ತಿಕ ಬದುಕಿಗೆ ಸಂಬಂಧಿಸಿದಂತೆ ಕೆಲವು ಆಚರಣೆಗಳು, ವಿಧಿ-ವಿಧಾನಗಳು, ಸಮಾರಂಭಗಳು ಈ ಪ್ರದೇಶಗಳಲ್ಲಿ ಕಾಣಸಿಗುತ್ತವೆ. ಅವುಗಳು ಈ ರೀತಿಯಲ್ಲಿವೆ.

**ಜಾತ್ರೆ**

ಗ್ರಾಮೀಣ ಸೊಗಡಿನ ನಿಜ ಸಂಸ್ಕೃತಿಯ ಆಚರಣೆಗಳೇ ಈ ಜಾತ್ರೆಗಳು. ಜಾತ್ರೆಗಳು ಮೇಲು-ಕೀಳು, ಬಡವ-ಬಲ್ಲಿಗ, ಮಡಿ-ಮೈಲಿಗೆ ಮೀರಿ ಜನಸಮುದಾಯದ ಅವಿನಾಭಾವವಾಗಿ ಕೆಲವು ದಿನಗಳವರೆಗೆ ನಡೆಯುವ ದೈವಾರಾಧನೆಯ ವಿಧಿಯಾಚರಣೆಯ ಜಾತ್ರೆ ಎನ್ನುತ್ತಾರೆ. ಇನ್ನೂ ಹಂಪನಾ ಅವರು 'ಕರ್ನಾಟಕ ಜಾತ್ರೆಗಳು' ಎಂಬ ಪುಸ್ತಕದಲ್ಲಿ ಜಾತ್ರೆಗೆ ಈ ರೀತಿಯ ವ್ಯಾಖ್ಯೆ ನೀಡುತ್ತಾರೆ. ಯಾವುದೋ ಒಂದು ನಿಗದಿತವಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದು ಜಾತ್ರೆಯಾಗಿರುತ್ತದೆ. ಇವು ಜಾನಪದರ ಜೀವನಾಡಿಗಳು. ಈ ಜಾತ್ರೆಗಳು ಹೆಚ್ಚಾಗಿ ಈ ಹೋಬಳಿ ಭಾಗದಲ್ಲಿ ಗ್ರಾಮದೇವತೆಯ ಜಾತ್ರೆಗಳೇ ಹೆಚ್ಚು. ಊರಿನ ಎಲ್ಲಾ ಜಾತಿಗಳ ಜನಕ್ಕೂ ಒಂದೊಂದು ಜವಾಬ್ದಾರಿ ವಿತರಣೆಯಾಗಿರುತ್ತದೆ. ಈ ಜವಾಬ್ದಾರಿಯನ್ನು ಸಂಬಂಧಪಟ್ಟವರು ಆನುವಂಶಿಕವಾಗಿ ನಿರ್ವಹಿಸುತ್ತಾ ಬಂದಿರುತ್ತಾರೆ. ಇಡೀ ಗ್ರಾಮದ ಐಕ್ಯತೆ ಸಾಮರಸ್ಯದ ಜೀವಾಳ ಈ ಗ್ರಾಮದೈವಗಳ ಜಾತ್ರೆ-ಉತ್ಸವಗಳೇ ಆಗಿರುತ್ತವೆ. ಇಲ್ಲಿ ಆಚರಿಸುವ ಧಾರ್ಮಿಕ ವಿಧಿಗಳು ಬಹಳ ಸಹಕಾರಿಯಾಗುತ್ತವೆ. ಬ್ರಾಹ್ಮಣರು ಈ ಕಾರ್ಯಗಳಲ್ಲಿ ಭಾಗಿಗಳಾಗಿ ಗ್ರಾಮದ ಏಕತೆಯ ಹಬ್ಬವಾಗಿ ಮೂಡಿಬರುತ್ತದೆ.

**ಕೂಡ್ಲಿಗಿಯ ಊರಮ್ಮನ ಜಾತ್ರೆ**

ಕೂಡ್ಲಿಗಿ ಹೋಬಳಿಯಲ್ಲಿಯೇ ಏಕೆ ತಾಲ್ಲೂಕಿನಲ್ಲಿಯೇ ದೊಡ್ಡದೆನ್ನಬಹುದಾದ ಜಾತ್ರೆ ಈ ಊರಮ್ಮನ ಜಾತ್ರೆ. ಈ ಜಾತ್ರೆಯನ್ನು ೯ ಅಥವಾ ೧೧ ವರ್ಷಗಳಿಗೊಮ್ಮೆ ಆಚರಿಸಲಾಗುತ್ತದೆ. ಈ ಜಾತ್ರೆಯಲ್ಲಿ ಆಚರಿಸುವ ಆಚರಣೆಗಳು ತುಂಬಾ ಭಯಭಕ್ತಿಯಿಂದ ತಮ್ಮನ್ನ ಸಂಪೂರ್ಣವಾಗಿ ತೊಡಗಿಸಿಕೊಂಡು ಆಚರಣೆ ನಿರ್ವಹಿಸುತ್ತಾರೆ. ತಪ್ಪಿದರೆ ಕಂಟಕ ಎದುರಾಗಬಹುದು ಎಂಬ ಆತಂಕದಿಂದ ನಿಷ್ಠೆಯಿಂದ ಜಾತ್ರೆ ಆಚರಿಸುತ್ತಾರೆ. ಮೊದಲು ಸಾರು(ಡಂಗುರ) ಹಾಕುವುದು, ಇದನ್ನ ದಲಿತನೊಬ್ಬ ಸಾರುತ್ತಾನೆ. ಅವನು ಚಲವಾದಿಯೇ ಆಗಿರುತ್ತಾನೆ. ಇದು ಜನರನ್ನು ಮಾನಸಿಕ ಮತ್ತು ಆರ್ಥಿಕವಾಗಿ ಸಿದ್ದಗೊಳಿಸುವ ಉದ್ದೇಶವಾಗಿರುತ್ತದೆ. ತದನಂತರ ಊರಿಗೆ ಬೇಲಿ ಹಾಕಲಾಗುತ್ತದೆ. ಇದರಿಂದ ಊರಿನ ಮೇರೆ ಗುರ್ತಿಸಿದಂತಾಗುತ್ತದೆ. ಮೇ ತಿಂಗಳ ಹಗೆಹುಣಸಿ(ಹುಣ್ಣಿಮೆ) ಜಾತ್ರೆ ಸಾಗುತ್ತದೆ. ಜಾತ್ರೆ ಶುರುವಾಗುವ ಮುಂಚಿತವಾಗಿ ಒಂದು ತಿಂಗಳ ಮುಂಚೆನೇ ಗ್ರಾಮದ ಎಲ್ಲಾ ದೇವತೆಗಳನ್ನು ಗಂಗೆಗೆ ಹೊರಡಿಸಿ, ಜಾತ್ರೆ ನೆರವೇರಿಸುವುದಾದರೆ, ನೆರವೇರಿಸಿ ಈ ಜಾತ್ರೆಗೆ ಹಣಿಗೊಳ್ಳುತ್ತಾರೆ. ಎಲ್ಲಾ ಸಮುದಾಯಗಳು ಭಾಗವಹಿಸುವ ಈ ಜಾತ್ರೆ ಪ್ರತಿ ಒಂದು ಜನಾಂಗದ ಮುಖ್ಯಸ್ಥರಿಗೆ ಒಂದೊಂದು ಕಾರ್ಯ ನೇಮಿಸಲಾಗಿದ್ದು, ಒಂದು ತಿಂಗಳ ಪೂರ್ವದಲ್ಲಿ ಘಟ್ಟ ಸ್ಥಾಪನೆ ಮಾಡಿ ದೇವಿಯ ಮೂಲಮೂರ್ತಿಗೆ ಬಣ್ಣಲೇಪನ ಮಾಡಲಾಗುತ್ತದೆ. ಮುಖ್ಯ ಭೂಮಿಯ ಪಾತ್ರವಾಗಿ ಕೂಡ್ಲಿಗಿಯ ಹಿರೇಮಠದ ಭೂತಯ್ಯನ ಮನೆಯವರು, ಈ ಕಾರ್ಯಕ್ಕೆ

ಚಾಲನೆ ನೀಡುತ್ತಾರೆ. ಬಣಕಾರ ಮನೆಯವರು, ಗೌಡರ ಮನೆಯವರು ಪ್ರಮುಖ ಪಾತ್ರ ವಹಿಸಿ ದಲಿತರಿಂದ ಹಿಡಿದು ಬ್ರಾಹ್ಮಣರವರೆಗೂ ಪ್ರತಿದಿನ ಒಂದೊಂದು ಕಾರ್ಯವಿಧಾನ ಕೈಗೊಂಡು ಒಂದು ದಿನ ಹೋಳಿಗೆ ಎಡೆ, ಇನ್ನೊಂದು ದಿನ ಬಲಿ ಆಚರಣೆ, ಅಂದು ಕೋಣನ ಬಲಿ ನೀಡುವುದು. ಅಂದಿನ ರಾತ್ರಿ ಊರಿನ ತುಂಬಾ ಸರ್ಗ(ಜೋಳದ ಅನ್ನ) ಉಗ್ಗುವ ಕೆಲಸ ಭರದಿಂದ ಸಾಗುತ್ತದೆ. ಸರ್ಗ ಉಗ್ಗುವನು ದಲಿತರ ವ್ಯಕ್ತಿಯಾಗಿದ್ದು ಅವನು ಲಗ್ನನಾಗಿ ಅವನ ಮೇಲೆ ಜೋಳದ ಸರ್ಗ ಹೊರಿಸಿಕೊಂಡು ಊರತುಂಬಾ ಚೆಲ್ಲುತ್ತಾರೆ. ಅಂದು ಯಾರು ಅಡ್ಡಬರುವಂತಿಲ್ಲ. ಇಷ್ಟೆಲ್ಲಾ ಆಚರಣೆಯಾಗಿ ಮೂರನೇ ದಿನ ಗಾವು ಜಿಗಿಯುವ ಪದ್ಧತಿ, ಆಚರಣೆ ಕಂಡುಬರುತ್ತದೆ. ಕೊನೆಗೆ ರಥೋತ್ಸವವಿರುತ್ತದೆ(ರಥ ಆಂಜನೇಯನ ದೇವಸ್ಥಾನದ್ದು). ರಥ ಎಳೆದುಕೊಂಡು ಹೋಗಿ ಅಲ್ಲಿಯೇ ಬಿಟ್ಟು ಮೂರ್ತಿಗೆ ಪರದೆಹಾಕಿ ಬಂದು ನಡುರಾತ್ರಿಯಲ್ಲಿ ಅವಳ ಕಾಷ್ಠಮೂರ್ತಿಯನ್ನು ತಂದು ಮತ್ತೊಂದು ಕೋಣಬಿಟ್ಟು ಅವಳನ್ನು ಪುನಃ ಮುತ್ತೈದೆ ಮಾಡಿ ಮರುಪರುಸೆಮಾಡಿ ಜನ ಮತ್ತೆ ಯತಾರೀತಿ ಜೀವನಕ್ಕೆ ಮರಳುತ್ತಾರೆ.

### ಮೊರಬದ ವೀರಭದ್ರೇಶ್ವರ ಜಾತ್ರೆ

ಈ ಹೋಬಳಿಯಲ್ಲಿ ಕಂಡುಬರುವ ಸಮಸ್ತ ನಾಗರಿಕರು ಭಾಗವಹಿಸುವ ಜಾತ್ರೆ ಈ ಮೊರಬದ ವೀರಭದ್ರೇಶ್ವ ಜಾತ್ರೆ. ಪುಷ್ಯಮಾಸದ ದಿನಗಳಲ್ಲಿ ಈ ಜಾತ್ರೆ ನಡೆಯುತ್ತದೆ. 'ಮೊರಬದ ತೇರು' ಎಂದೇ ಖ್ಯಾತವಾಗಿರುವ ಈ ಭಾಗದಲ್ಲಿ ವೀರಭದ್ರೇಶ್ವರನ ಭಕ್ತರು ಕೂಡ್ಲಿಗಿ ಹೋಬಳಿ ಅಲ್ಲದೆ ಹೊರ ತಾಲ್ಲೂಕು, ಜಿಲ್ಲೆ, ರಾಜ್ಯಗಳಿಂದಲೂ ಬರುತ್ತಾರೆ. ಕೂಡ್ಲಿಗಿ ತಾಲ್ಲೂಕಿನ ೨ನೇ ಅತಿದೊಡ್ಡ ಜಾತ್ರೆ ಇದಾಗಿರುತ್ತದೆ (ಮೊದಲನೆಯದು ಕೊಟ್ಟೂರು ಜಾತ್ರೆ). ಮುಸಲ್ಮಾನರ ಸೈನ್ಯ ಬಂದ ಕೂಡಲೇ ಸೈನ್ಯಕ್ಕೆ ಚಲಿಸಲಾಗಲಿಲ್ಲವಂತೆ ಆಗ ಯೋಚಿಸಿದ ಮುಸಲ್ಮಾನ ದೊರೆ ಈ ದೈವದ ಮಹಿಮೆ ಕೇಳಿ ಕೈಮುಗಿಯಲು ಸ್ವಾಮಿಗೆ ರಥೋತ್ಸವ ಮಾಡಲು ನಿರ್ಧರಿಸಿದ ಪುಷ್ಯಮಾಸ ಮುಸಲ್ಮಾನರಿಗೂ ಪವಿತ್ರವಂತೆ. ಪುಷ್ಯ ಶುದ್ಧ ಪಂಚಮಿಗೆ ರಥೋತ್ಸವವನ್ನು ಆಚರಿಸುತ್ತಾರೆ, ಆ ಪದ್ಧತಿ ಇಂದಿಗೂ ಜಾತ್ರೆಯಾಗಿ ಮುಂದುವರೆದಿದೆ. ಹೊಸ್ತಿಲು ಹುಣ್ಣಿಮೆಗೆ ಈ ಜಾತ್ರೆ ನಡೆಯುತ್ತದೆ. ಜಾತ್ರೆ ನಡೆಯುವ ಪೂರ್ವದಲ್ಲಿ ರಥೋತ್ಸವ ಸಕಲ ವಿಧಿ-ವಿಧಾನಗಳಿಂದ ನೆರವೇರುತ್ತದೆ. ನಂತರ ಜಾತ್ರೆಯು ೪-೫ ದಿನಗಳ ಕಾಲ ನಿರಂತರವಾಗಿ ಜನಭರಿತವಾಗಿರುತ್ತದೆ. ಕೂಡ್ಲಿಗಿಯವರಿಗೆ ಮೊದಲ ಜಾತ್ರೆ ಎಂದೇ ಮೀಸಲಾಗಿರುತ್ತದೆ. ವೀರಣ್ಣ ಕೂಡ್ಲಿಗಿಯವರಿಗಾಗಿ ಕಾಯುತ್ತಿರುತ್ತಾನೆ ಎಂಬ ಐತಿಹ್ಯ ಹಿಂದಿನಿಂದಲೂ ಜನ ಆಡುತ್ತಾರೆ. ಮೊದಲ ನಾಲ್ಕುದಿನ ಉಚ್ಚಯ ನಡೆದ ನಂತರ ರಥೋತ್ಸವ ಜರುಗುತ್ತದೆ, ನಂತರವೇ ಜಾತ್ರೆ ಆರಂಭ. ಭಕ್ತಾದಿಗಳಿಗೆ ಅನ್ನ ಪ್ರಸಾದದ ದಾಸೋಹ ಕೂಡ ಈ ದಿನಗಳಲ್ಲಿ ನಡೆಯುತ್ತದೆ. ಈ ಊರಿನ ಜಾತ್ರೆ ನಡೆಯುವುದು ದೊಡ್ಡ ವೀರಣ್ಣನ ಸಮ್ಮುಖದಲ್ಲಿ ಜಾತ್ರೆಯಾದ ನಂತರ ಮರಿಪರುಷೆ- ಇದು ವೀರಣ್ಣ ಬೇಟೆಗೆ ಹೋಗುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ಜಾತ್ರೆಯಾಗಿ ಮೂರನೇ ದಿನ ಈ ಮರಿಪರಿಷೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಉರುಳುಸೇವೆ, ದೀರ್ಘದಂಡ ನಮಸ್ಕಾರ ಮುಂತಾದ ಆಚರಣೆ ಈ ಜಾತ್ರೆಯಲ್ಲಿ ಜರುಗುತ್ತವೆ. ಇನ್ನೊಂದು ವಿಶೇಷ ಎಂದರೆ ಈ ಭಾಗದ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ಎಷ್ಟು ಆರಾಧ್ಯನೋ ಅಷ್ಟೇ ಶ್ರೀ ವೀರಭದ್ರೇಶ್ವರ ಸ್ವಾಮಿ, ನಾಯಕನಹಟ್ಟಿ, ಕೊಟ್ಟೂರೇಶ್ವರ, ಮೊರಬದ ವೀರಭದ್ರೇಶ್ವರ ದೇವಸ್ಥಾನಗಳಲ್ಲಿ ಕೊಬ್ಬರಿ ಸುಡುವ ಪದ್ಧತಿ ಸಾಮಾನ್ಯವಾಗಿ ಕಾಣಸಿಗುತ್ತದೆ. ಜೊತೆಗೆ ಪುಣ್ಯಪುರುಶಃ ಗುಡಿ ತೊಳೆಯುವ ಪದ್ಧತಿಯೊಂದಿಗೆ ಜಾತ್ರೆಯು ಸಮಾಪ್ತಿಗೊಳ್ಳುತ್ತದೆ.

## ಮಧ್ಯಾಹ್ನ ಮಾರವ್ವ

ಈ ಆಚರಣೆ ಜಾತ್ರ ಸ್ವರೂಪದಲ್ಲಿ ಕಂಡುಬರುತ್ತದೆ. ಕೂಡ್ಲಿಗಿ ಹೋಬಳಿಯ ಕೆಲವು ಭಾಗಗಳಲ್ಲಿ ಅಂದರೆ ಈಚಲಬೊಮ್ಮನಹಳ್ಳಿ, ಒಡಲಡಕು ತುಪ್ಪಾಕನಹಳ್ಳಿ ಗ್ರಾಮಗಳಲ್ಲಿ ಈ ರೀತಿಯ ಜಾತ್ರೆ ಇದೆ. ಇದು ಒಂದೇ ದಿನದಲ್ಲಿ ಅದು ಮಧ್ಯಾಹ್ನದ ಹೊತ್ತಿನಲ್ಲಿ ಆರಂಭವಾಗಿ ರಾತ್ರಿಯ ವೇಳೆಗಾಗಲೇ ಮುಗಿದುಹೋಗುವ ಜಾತ್ರೆಯಾಗಿದೆ. ಊರಿಗೆ ಮಾರಿಯ ಕಾಟ ಇಲ್ಲದಿರಲಿ, ದನಕರುಗಳು, ಜಾನುವಾರುಗಳಿಗೆ, ರೋಗರುಜಿನು ಬಾಧಿಸದಿರಲಿ ಎಂಬ ನಂಬಿಕೆ ಎಡೆಯಲ್ಲಿ ಊರಿನ ಗ್ರಾಮದೇವತೆಯಾದ ಮಾರವ್ವನಿಗೆ ಕೋಳಿ, ಕುರಿಗಳ ಬಲಿ ನೀಡುತ್ತಾರೆ. ಇದೊಂದು ಗ್ರಾಮೀಣ ಬದುಕಿನ ಶ್ರಮದ ಆಯಾಸ ಕಳೆದು, ಜನರಲ್ಲಿ ಹೊಸ ಆಸೆಗಳನ್ನು ತುಂಬುವ ಆಚರಣೆಯ ಕ್ರಮವಾಗಿ ಮೂಡಿಬರುತ್ತದೆ. ಜನರು ಈ ದೃಷ್ಟಿಯಲ್ಲಿ ಆದರೂ ಗ್ರಾಮದೇವರ ಸ್ಮರಿಸುವ ಕಾರ್ಯ ಇದಾಗಿರಬೇಕು. ಬಂಧು-ಬಾಂಧವರನ್ನು ಕರೆಸಿ ಒಂದು ದಿನ ಹೋಳಿಗೆ ಎಡೆಮಾಡಿ ಅರ್ಪಿಸಿ, ಇನ್ನೊಂದು ದಿನ ಬ್ಯಾಟಿ ಕಡಿದು ಸಂಭ್ರಮಿಸುತ್ತಾರೆ. ಪರಸ್ಪರ ಮಿಲನದಿಂದ ಹೊಸ ವಾತಾವರಣ ರಚನೆಗೊಳ್ಳುತ್ತವೆ ಇಂತಹ ಜಾತ್ರೆಗಳಿಂದ.

## ಹೋಳಿಗೆ ಅಮ್ಮ

ಜೂನ್ ತಿಂಗಳಲ್ಲಿ ಊರಿನವರೆಲ್ಲಾ ಸೇರಿ ಹೋಳಿಗೆಯಮ್ಮನ ಮಾಡುತ್ತಾರೆ. ಈ ಭಾಗದಲ್ಲಿ ಅಮ್ಮನ ಮಾಡುತ್ತೇವೆ ಎಂಬ ನುಡಿ ಇದೆ. ಮಂಗಳವಾರದಂದು ಮಾಡಲಾಗುತ್ತದೆ.[೨] ಒಂದೆರಡು ದಿನದ ಮುಂಚೆಯೇ ಸಾರು(ಕೂಗು) ಹಾಕಿದನಂತರ ಆಚರಣೆಗೆ ಬೇಕಾದ ಕುಡಿಕೆ, ಬಳೆ ಹೊತ್ತು ಕುಂಬಾರರು ಓಣಿ ಓಣಿಗೆ ಹೋಗಿ ಮಾರುತ್ತಾರೆ. ಹಾಗೆ ಅವಳಿಗೆ ಬೇಕಾದ ರವಿಕೆ, ಕಾಯಿ, ಒಂದು ರೂಪಾಯಿ, ದಕ್ಷಿಣೆ ಜೋಡಿಸಿ ಮುಂಜಾನೆಯೇ ಸ್ವಚ್ಛಮಾಡಿ ಹೋಳಿಗೆ ತಯಾರು ಮಾಡಿ, ತಂದ ಸಾಮಗ್ರಿಯನ್ನು ಸಾರಿಸಿದ(ತೊಳೆದ) ಒಂದು ಜಾಗದಲ್ಲಿ ಹೂವು, ಬೇವಿನ ತಪ್ಪಲು, ಹರಿಸಿನ, ಕುಂಕುಮ ಹಚ್ಚಿ, ಕಾಯಿ ಒಡೆದು, ಹೋಳಿಗೆ ಎಡೆಹಾಕಿ ಮನೆಮಂದಿಯೆಲ್ಲಾ ಅವಳಿಗೆ ನಮಸ್ಕಾರ ಮಾಡಿ ಯಾವುದೇ ರೋಗರುಜಿನು, ಆಪತ್ತು ಬಾರದೆ, ದನಕರು ಮತ್ತು ಬೆಳೆ ಸಮೃದ್ಧಿಯಾಗಲಿ ಎಂದು ಹರೆಸಿಕೊಂಡು ಅವಳನ್ನು ಬಿಟ್ಟುಬರುತ್ತಾರೆ. ಇದು ಹೋಬಳಿಯ ಎಲ್ಲಾ ಗ್ರಾಮಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಕೂಡ್ಲಿಗಿಯಂತ ದೊಡ್ಡ ಪಟ್ಟಣದಲ್ಲಿ ವಿಶೇಷ ಕಳೆ ಇರುತ್ತದೆ. ಈ ಆಚರಣೆಯಲ್ಲಿ ಹೊರಗಿನವರಿಗೆ ಊಟಕ್ಕೆ ಕರೆಯುವುದಿಲ್ಲ, ಮಾಡಿದ ಅಡುಗೆ ಹೊರಗಡೆ ಕೊಡುವುದಿಲ್ಲ. ವಿಶೇಷ ಎಂದರೆ ಕರ್ನಾಟಕದ ಯಾವುದೇ ಒಂದು ತಾಲ್ಲೂಕು ಕೇಂದ್ರ ಇಷ್ಟೊಂದು ದೊಡ್ಡಮಟ್ಟದಲ್ಲಿ ಊರಿಗೂರೇ ಆಚರಣೆ ಮಾಡುವುದು ಒಂದು ಅಚ್ಚರಿಯೇ ಸರಿ.

## ವಿವಾಹ

ವಿವಾಹ ಪವಿತ್ರ ಬಂಧ ಎಂಬ ಭಾವನೆ ಇದೆ. ಇದೊಂದು ಸಾಮಾಜಿಕ ಒಪ್ಪಂದ ಜೀವನದ ಪರಸ್ಪರ ಹೊಂದಾಣಿಕೆ,[೪] ಭಾವನೆಗಳ ಹಂಚುವಿಕೆ ಅಗತ್ಯವಾದ ವೈಯಕ್ತಿಕ ತ್ಯಾಗಗಳಿಂದ ಕೂಡಿರುತ್ತದೆ. ಹಲವಾರು ಸಮುದಾಯಗಳು ವಿವಿಧ ಬಗೆಯ ವಿವಾಹ ಆಚರಣೆ ರೂಢಿಸಿಕೊಂಡಿವೆ. ಉದಾಹರಣೆಗೆ: ಕೂಡ್ಲಿಗಿ, ಹೋಬಳಿ ಪರಿಸರದಲ್ಲಿ ಊರನಾಯಕರು ಗಂಡಿನ ಮನೆಮುಂದೆ ವಿವಾಹಕಾರ್ಯ ನೆರವೇರಿಸಿದರೆ, ಮ್ಯಾಸನಾಯಕರು ಹೆಣ್ಣಿನ ಮನೆಮುಂದೆ ಬತ್ತಿತೊಪ್ಪಲಿನ ಹಂದರದ ಅಡಿಯಲ್ಲಿ ವಿವಾಹಕಾರ್ಯ ಮಾಡುತ್ತಾರೆ. ಈ ಒಂದು ಸಮುದಾಯಗಳು ಅಷ್ಟೇ ಅಲ್ಲದೆ ವಿವಿಧ ಜಾತಿ ಸಮುದಾಯದಲ್ಲಿ ವಿಭಿನ್ನ ವಿವಾಹದ

ಆಚರಣೆ ಇದೆ. ಆದರೆ ಇಂದು ಕಾಲಬದಲಾದಂತೆ ಅಂತರ್‌ಜಾತಿಯ ವಿವಾಹಗಳು ಹೆಚ್ಚಾಗುತ್ತವೆ. ಮಾನವಕುಲ ಒಂದೇ ಎನ್ನುವ ಆಧುನಿಕ ಶಿಕ್ಷಣದ ಮಂತ್ರವು ಮೇಲು-ಕೀಳು, ಬಡವ-ಬಲ್ಲಿದ ಸಮಾಜದಲ್ಲಿ ತೊಡೆದುಹಾಕುವಲ್ಲಿ ವಿವಾಹ ಕಾರಣವಾಗುತ್ತಿದೆ. ಆದರೆ ಗ್ರಾಮೀಣ ಭಾಗದಲ್ಲಿ ಮಾತ್ರ ವಿವಾಹದ ಕಟ್ಟುಪಾಡುಗಳು, ಗೊಲ್ಲರ, ಕುರುಬರ, ದಲಿತರಲ್ಲಿ ಇಂದಿಗೂ ಬದಲಾಗಿಲ್ಲ.

**ಕೃಷಿ ಆಚರಣೆ**

ಭಾರತ ಕೃಷಿ ದೇಶ. ರೈತ ಈ ದೇಶದ ಬೆನ್ನೆಲುಬು. ಭಾರತ ಶೇಕಡ ೭೦ರಷ್ಟು ಕೃಷಿ ಅವಲಂಬಿಸಿದೆ. ಹೋಬಳಿ ಪರಿಸರವು ಹೆಚ್ಚು ಮುಂಗಾರು ಅವಲಂಬಿಸಿದೆ. ಮುಂಗಾರು ಹನಿ ಭೂಮಿಗೆ ಬಿದ್ದೊಡನೆ ಇಲ್ಲಿನ ಕೃಷಿಕವರ್ಗ ಚಟುವಟಿಕೆ ಚುರುಕುಗೊಳಿಸುತ್ತವೆ. ಕೃಷಿಕಾರ್ಯವು ಸೋಮವಾರ ಹೊರತುಪಡಿಸಿ(ಬಸವಣ್ಣ ದಿನ ಅಂದು ಎತ್ತುಗಳ ಮೇಲೆ ನೊಗ ಹೂಡುವುದಿಲ್ಲ). ಉಳಿದ ದಿನಗಳಲ್ಲಿ ಬಿತ್ತನೆ ಆರಂಭಿಸುತ್ತಾರೆ. ಬಿತ್ತುವ ಪೂರ್ವದಲ್ಲಿ ಹೊಲದಲ್ಲಿರುವ ದೈವಗಳಾದ ಬಸವಣ್ಣ, ಆಂಜನೇಯ, ನಾಗಪ್ಪ, ಗುಂಡುಬರಮಪ್ಪ, ಸ್ತ್ರೀ ದೇವತೆಗಳಿಗೆ ಹುಗ್ಗಿ ಅಥವಾ ಬೆಲ್ಲಮಂಡಕ್ಕಿ ನೈವೇದ್ಯ ಮಾಡಿ ಬಂದ ನಂತರ ಎಲ್ಲರಿಗೆ ಹಂಚಿ ಭೂತಾಯಿಗೆ ನಮಿಸಿ ಬಿತ್ತನೆ ಶುರು ಮಾಡುತ್ತಾರೆ. ಇದು ಸಾಮಾನ್ಯವಾಗಿ ಹೋಬಳಿಯಲ್ಲಿ ಕಂಡುಬರುವ ಕೃಷಿ ಆಚರಣೆ.

**ಹಬ್ಬ**

ಈ ನೆಲೆ ಧರ್ಮ-ಕರ್ಮಗಳಲ್ಲಿ ನಂಬಿಕೆ ಇಟ್ಟಿರುವುದು ಪ್ರಾಚೀನ ಕಾಲದಿಂದಲೂ ನೋಡುತ್ತಾ ಬಂದಿದ್ದೇವೆ; ಇಲ್ಲಿ ವಾಸಿಸುವ ಜನರು ಅಷ್ಟೆ. ತಾವು ತಮ್ಮವರ ಕ್ಷೇಮಕ್ಕಾಗಿ ಸುಖ-ಸಂತೋಷಕ್ಕಾಗಿ ಹೊಂದಾಣಿಕೆಗಾಗಿ, ಆತ್ಮೀಯತೆಯಿಂದ ಬದುಕುವುದಕ್ಕಾಗಿ ಇತರರೊಂದಿಗೆ ಸಹಬಾಳ್ವೆಯ ಜೀವನಕ್ಕಾಗಿ ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದಾರೆ.[೫] ಭಾರತೀಯರಿಗೆ ಮುನ್ನೂರು ಅರವತ್ತೈದು ದಿನಗಳು ಹಬ್ಬ-ಹರಿದಿನಗಳಾದರೂ ವಿಶೇಷವಾಗಿ ಸಂದರ್ಭಕ್ಕೆ ತಕ್ಕಂತೆ ಹಬ್ಬ-ಹರಿದಿನ, ಜಾತ್ರೆ-ಉತ್ಸವಗಳಲ್ಲಿ ದೇಹದಂಡನೆ, ವ್ರತಾಚರಣೆ, ದೈವರಾಧನೆ, ಪೂಜೆ-ಪುನಃಸ್ಕಾರಗಳು ವಿಶೇಷವಾಗಿ ಕಂಡುಬರುತ್ತವೆ. ಪ್ರಾತಃ ಕಾಲದಲ್ಲಿ ಎಣ್ಣೆ ನೀರಿನ ಸ್ನಾನ, ನವವಸ್ತ್ರಧಾರಣೆ, ವಿವಿಧ ಖಾದ್ಯ ತಯಾರಿಕೆ, ಆಯಾ ಹಬ್ಬಕ್ಕೆ ಅನುಗುಣವಾಗಿ ಎಡೆ, ಪ್ರಸಾದ, ಬಲಿಪೂಜೆ, ಆಚರಣೆ ಈ ಪ್ರದೇಶದ ಆಚರಣೆಯಲ್ಲಿ ಎದ್ದುಕಾಣುತ್ತವೆ. ಇಲ್ಲಿನ ಹಬ್ಬಗಳು ಶಿಷ್ಟ ಪರಿಶಿಷ್ಟಕ್ಕೆ ಅನುಗುಣವಾಗಿ ಸಮ್ಮೇಳಿಸಿಕೊಂಡು ಪ್ರಾಂತೀಯತೆಗೆ ಅನುಗುಣವಾಗಿ ಆಚರಿಸಲ್ಪಡುತ್ತವೆ. ಅಲ್ಲಿ ನೃತ್ಯ, ಸಂಗೀತ, ಕೋಲಾಟ, ಹಲಗೆಸದ್ದು, ಡೊಳ್ಳು, ಹುರುಮೆ ಹೀಗೆ ವಿಶಿಷ್ಠ ಹಬ್ಬಗಳಲ್ಲಿ ಕಂಡುಬರುತ್ತವೆ.

**ಯುಗಾದಿ**

ಹಿಂದೂಗಳು ಹೊಸವರುಷದ ಹಿನ್ನೆಲೆಯಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಮಾರ್ಚ್ ಇಲ್ಲವೇ ಏಪ್ರಿಲ್ ತಿಂಗಳಲ್ಲಿ ಬರುತ್ತದೆ. ಶಾಲಿವಾಹನ ಶಖ ಸಂವತ್ಸರದ ಪ್ರಥಮ ಹಬ್ಬವಾಗಿದೆ. ದ.ರಾ. ಬೇಂದ್ರೆಯವರ ಯುಗಯುಗಾದಿ ಕಳೆದರು ಯುಗಾದಿ ಮರಳಿ ಬರುತ್ತಿದೆ ಎಂಬ ಕವಿವಾಣಿ ಆಳವಾದ ಅರ್ಥ ತೆರೆದಿಡುತ್ತದೆ. ಯುಗ ಎಂದರೆ ಹೊಸತು, ಆದಿ, ಆರಂಭ ಆಗಿದೆ(ರಾಜ್ಯ ಸರ್ಕಾರ ಹೊಸ ಲೆಕ್ಕವನ್ನು ಈ ಹಬ್ಬದೊಂದಿಗೆ ಆರಂಭಿಸುತ್ತದೆ) ಇದೊಂದು ಸಾರ್ವತ್ರಿಕ ಹಬ್ಬ. ಈ ಹಬ್ಬದ ಪ್ರತೀಕ ಬೇವು-ಬೆಲ್ಲ ಇದರ ತಾತ್ಪರ್ಯ ದುಃಖ-ಸುಖಗಳನ್ನು ಸಮನಾಗಿ ಸ್ವೀಕರಿಸುವುದು. ಸಮರಸದಿಂದ ಕೂಡಿರುವುದು ಈ ಯುಗಾದಿ.[೬] ಈ

ಹಬ್ಬ ವಿವಿಧ ರಾಜ್ಯಗಳಲ್ಲಿ ವಿವಿಧ ಹೆಸರುಗಳಿಂದ ಆಚರಿಸಲ್ಪಡುತ್ತದೆ. ಕೂಡ್ಲಿಗಿ ಹೋಬಳಿ ಪರಿಸರದಲ್ಲಿ ಯುಗಾದಿಯನ್ನು ಎಲ್ಲಾ ಜನಾಂಗದವರು ಭಿನ್ನವಾಗಿ ಆಚರಿಸುತ್ತಾರೆ. ಕೆಲವರು ಮಾವು ತೋರಣಗಳಿಂದ ಬಾಗಿಲು ಶೃಂಗರಿಸಿ, ಹೊಸಬಟ್ಟೆ ಧರಿಸಿ, ಬೇವು-ಬೆಲ್ಲ ತಿಂದು ಒಳ್ಳೇ ಒಳ್ಳೇ ಮಾತನಾಡು ಎಂಬುದಾಗಿ ಆಶಿಸಿದರೆ ಮತ್ತೆ ಕೆಲವರು ಈ ಹಬ್ಬ ಆಚರಿಸುವುದೇ ಇಲ್ಲ. ವಿಶೇಷವಾಗಿ ಮ್ಯಾಸಬೇಡ ಜನಾಂಗದಲ್ಲಿ ಬೇವು ಮಾಡುವುದಿಲ್ಲ, ಬೇರೆಯವರಿಂದ ತರಿಸಿಕೊಂಡು ತಿಂದು ಸ್ನಾನ ಮಾಡುವ ಪದ್ಧತಿ ಇದೆ. ಕಾರಣ ಮಾವು ತೋರಣ ತರಲು ಹೋದ ತಮ್ಮ ಹಿರಿಯರು ಮನೆಗೆ ಹಿಂದಿರುಗಲಿಲ್ಲ ಎಂಬ ಹೇಳಿಕೆ ನೀಡುತ್ತಾರೆ, ಬಾಗಿಗಳಾಗುತ್ತಾರೆ. ಅಂದಿನ ರಾತ್ರಿ ವಗ್ಗರಣೆ(ಮಂಡಕ್ಕಿಡ ಧಾನ್ಯ) ಮೆಣಸಿನಕಾಯಿ ಮಾಡಿ ಸೇವಿಸಿ ಸಂಪೂರ್ಣ ಆಹಾರ ಅಂದು ನಿಷೇಧಿಸುತ್ತಾರೆ. ಕೆಲವು ಗ್ರಾಮಗಳಲ್ಲಿ ಶಿವಮಂದಿರಗಳೇ ಇಲ್ಲ, ಆದರೆ ಗ್ರಾಮೀಣ ಜನ ತಮ್ಮ ಊರುಗಳಲ್ಲಿ ಇರುವ ಗ್ರಾಮದೇವತೆಯ ಗುಡಿಗೋ ಬಸವಣ್ಣ, ಆಂಜನೇಯ, ವೀರಭದ್ರ ಮುಂತಾದ ದೇವರ ದರ್ಶನಮಾಡಿ ಶಿವನನ್ನು ನೋಡಿದಷ್ಟು ಆನಂದ ಪಡೆಯುತ್ತಾರೆ. ಹಲವು ದೇವರಲ್ಲಿ ಏಕ ದೇವರನ್ನು ಕಾಣುವ ಪರಿಪಾಠ ನಮ್ಮ ಗ್ರಾಮೀಣ ಹಬ್ಬಗಳಲ್ಲಿ ನೋಡಬಹುದು.

**ದೀಪಾವಳಿ**

ದೀಪಾವಳಿಯು ದೀಪಗಳ ಅರ್ಥಾತ್ ಬೆಳಕಿನ ಹಬ್ಬ, ಮನೆ ಮನದ ಕತ್ತಲೆಯನ್ನು ನಿವಾರಿಸಿ ಬೆಳಕನ್ನು ಉಂಟುಮಾಡುವ ಹಬ್ಬ. ನರಕಚತುರ್ದಶಿ, ಲಕ್ಷ್ಮಿಪೂಜೆ, ಬಲಿಪಾಡ್ಯ ಎಂದು ಮೂರು ದಿನಗಳವರೆಗೆ ಆಚರಿಸುವ ಹಬ್ಬ. ಭಾರತದ ಎಲ್ಲೆಡೆಯೂ ದೀಪಾವಳಿ ಆಚರಣೆ ಇದೆ. ಎಲ್ಲ ಮತಧರ್ಮದವರೂ ಅನುಸರಿಸುವ ಹಬ್ಬವಿದು.[೭] ಹೋಬಳಿ ಪ್ರದೇಶದಲ್ಲಿ ಮೊದಮೊದಲು ಮೇಲ್ವರ್ಗದವರೇ ಹೆಚ್ಚಾಗಿ ಆಚರಿಸುತ್ತಿದ್ದ ಹಬ್ಬ ಇಂದು ಗ್ರಾಮ, ನಗರಗಳೆನ್ನದೇ ಆವರಿಸಿಕೊಂಡಿದೆ. ಧನದದೇವಿಯಾದ ಲಕ್ಷ್ಮೀಯನ್ನು ಯಾರು ಬೇಡ ಎನ್ನೊಲ್ಲ. ಹಾಗಾಗಿ ಬಡವ ಬಲ್ಲಿಗನಾಗಿ ತಕ್ಕಮಟ್ಟಿಗಾದರೂ ಅವಳ ಪೂಜಾ ಆರಾಧನೆ ಮಾಡುತ್ತಾರೆ. ಗ್ರಾಮದಲ್ಲಿ ಕೃಷಿಕರು ಧಾನ್ಯರೂಪದಲ್ಲಿ ಲಕ್ಷ್ಮೀಯನ್ನು ಪೂಜಿಸಿದರೆ ಪಟ್ಟಣವಾಸಿಗಳು ತಳಿರು ತೋರಣ, ಹೂವಿನ ಅಲಂಕಾರ ವಿದ್ಯುತ್‌ದೀಪಗಳಿಂದ ತಮ್ಮ ಅಂಗಡಿ-ಮಳಿಗೆಗಳನ್ನು ಶೃಂಗರಿಸಿ ಪಟಾಕಿ ಹಾರಿಸುವುದರ ಮೂಲಕ ಸಂತೋಷ ಮೆರೆಯುತ್ತಾರೆ.

**ಗಣೇಶ ಚತುರ್ಥಿ**

ಶ್ರಾವಣ ಕಳೆದು ಭಾದ್ರಪದ ಶುದ್ಧ ಚತುರ್ಥಿ ಬಂದಿತೆಂದರೆ ಗಣೇಶನ ಹಬ್ಬದ ಸಂಭ್ರಮ ಎಲ್ಲೆಡೆ ಆಚರಣೆಗೊಳ್ಳುತ್ತದೆ.[೮] ಪ್ರಾಚೀನ ಪುರಾಣ ಕಾಲದಿಂದಲೂ ಗಾಣಪತ್ಯ ಪಂಥವನ್ನು ಕಾಣುತ್ತೇವೆ. ಶೈವ, ವೈಷ್ಣವ, ಶಾಕ್ತದಂತೆ ಪ್ರತ್ಯೇಕವಾಗಿ ಗುರ್ತಿಸಿಕೊಳ್ಳುವ ಪಂಥ ಇದಾಗಿದೆ. ಗ್ರಾಮೀಣ ಬದುಕಿನಲ್ಲಿ ಇವುಗಳಾವು ತಿಳಿಯದೇ ಇದ್ದರೂ ಅವರಿಗೆಲ್ಲ ಶಿವಪಾರ್ವತಿಯ ಮಗ ಗಣೇಶ ಎಂಬುದು ಮಾತ್ರ ಮರೆತಿಲ್ಲ. ಜಾನಪದೀಯ ಬದುಕಿನಲ್ಲಿ ಅವರ ಆಚರಣೆಯ ಒಂದು ಭಾಗವಾಗಿದ್ದಾನೆ ಗಣೇಶ. ಪ್ರಥಮವಂದಿತನಾಗಿರುವ ಇವನಿಗೆ ಇಂದು ಗ್ರಾಮೀಣ ಸಂಸ್ಕೃತಿಯಲ್ಲಿ ಅಂದರೆ ಹೋಬಳಿ ಭಾಗದಲ್ಲಿ ಇವ ಹೆಚ್ಚು ಜನಪ್ರಿಯನಾಗಿದ್ದಾನೆ. ಪಟ್ಟಣದಲ್ಲಿ ಅಲ್ಲದೆ, ಪ್ರತಿ ಓಣಿ ಓಣಿಯಲ್ಲಿ ಗಲ್ಲಿಗಳಲ್ಲಿ ಕುರಿಸುತ್ತಾರೆ. ಇದಕ್ಕೆಂದೇ ಸಂಘ-ಸಂಸ್ಥೆ, ಆಟೋಚಾಲಕರು, ಕಲಾವಿದರು, ಕೆಲಸಗಾರರು ಕೆಲವು ಬಳಗಗಳು, ಸಾಮಾಜಿಕ ಕಾರ್ಯಕರ್ತರು, ಹತ್ತುಹಲವು ರೀತಿಯಲ್ಲಿ ಆಚರಣೆ-ವಿಧಿಪ್ರಕಾರ ಸಾಮಾಜಿಕವಾಗಿ ಆಚರಿಸುತ್ತಾರೆ. ಗಣೇಶನ ಕೂರಿಸುವ ರೀತಿ ರಿವಾಜುಗಳು

ಏನೇ ಇದ್ದರೂ ಅವು ಶಾಸ್ತ್ರೋಕ್ತವಾಗಿ ಕೂರಿಸುವ ಪರಿಪಾಠವಿದೆ. ಜೊತೆಗೆ ೧ ದಿನ, ೩ ದಿನ, ೫ ದಿನ, ೯ ದಿನ, ೧೧ ದಿನಗಳವರೆಗೆ ಕೂರಿಸುತ್ತಾರೆ. ವಿವಿಧ ಕಡೆಗಳಿಂದ ಸಂಗೀತವಾದ್ಯಗೋಷ್ಠಿ ನೃತ್ಯಕಲಾವಿದರನ್ನು, ಹಾಸ್ಯಕಲಾವಿದರಿಂದ ಕರೆಸಿ ಹಲವು ದಿನಗಳವರೆಗೆ ಹಬ್ಬವನ್ನು ಆಚರಿಸಿ, ಕಳಿಸುವ ದಿನ ಅನ್ನ ಸಂತರ್ಪಣೆ ಸಾಮಾಜಿಕ ಕಾರ್ಯದಂತ ಚಟುವಟಿಕೆ ಈ ಹಬ್ಬದಲ್ಲಿ ನೋಡಬಹುದು.

**ನಾಗರ ಪಂಚಮಿ**

ನಮ್ಮಲ್ಲಿ ನಾಗಪೂಜೆ ಆರ್ಷೇಯವಾಗಿ ಬಂದಿದೆ. ಪುರಾಣ, ಕಾವ್ಯ, ಮಹಾಕಾವ್ಯ ಮತ್ತು ಜನಪದದಲ್ಲಿ ನಾಗನಿಗೆ ಸಂಬಂಧಿಸಿದ ಹಲವಾರು ಉಲ್ಲೇಖಗಳಿವೆ. ಕೆಲವರ ಪ್ರಕಾರ ಭೂಮಿಯ ಮೇಲೆ ಮೊದಲುಗೊಂಡು ಪೂಜೆಯೇ ನಾಗಪೂಜೆ ಎಂಬ ಮಾತಿದೆ. ಶ್ರಾವಣಮಾಸದ ಶುಕ್ಲಪಕ್ಷದ ಪಂಚಮಿ ತಿಥಿಯಲ್ಲಿ ಈ ಪರ್ವವನ್ನು ಆಚರಿಸುವುದು ಕಂಡುಬರುತ್ತದೆ. ಹಲವು ಕಾರಣಕ್ಕಾಗಿ ನಾಗರಪಂಚಮಿ ಆಚರಿಸುತ್ತಾರೆ. ಇಷ್ಟಾರ್ಥ ಸಿದ್ಧಿಗಾಗಿ ಪುತ್ರಪ್ರಾಪ್ತಿಗಾಗಿ, ಅವುಗಳಿಂದ ಭಾದೆ ಬರದಿರಲಿ ಎಂಬ ನಂಬಿಕೆ ಅಡಿಯಲ್ಲಿ ಈ ಹಬ್ಬದ ಆಚರಣೆ ಇದೆ.[೯] ಅವು ಏನಿದ್ದರೂ ಗ್ರಾಮೀಣ ಸೊಗಡಿನ ಈ ಹಬ್ಬ ನಮ್ಮ ಹೋಬಳಿ ಭಾಗದಲ್ಲಿ ಜೋರಾಗಿಯೇ ಆಚರಿಸಲಾಗುತ್ತದೆ. ಈ ಹಬ್ಬದಲ್ಲಿ ಉಪವಾಸ, ವ್ರತಾಚರಣೆ ಇದ್ದು ನಾಗನಿಗೆ ತಂಬಿಟ್ಟು, ಉಂಟೆ, ಉಸುಳಿ ಮಾಡಿ ಹುತ್ತಿಗೋ, ಕಲ್ಲಿನ ನಾಗರಕ್ಕೆ ಹಾಲೆರೆಯುವ ಪದ್ಧತಿ ಮನೆಮಂದಿಯ ಎಲ್ಲರ ಹೆಸರುಗಳನ್ನು ಹೇಳಿ ಹಾಲಾಕುತ್ತಾರೆ. ಈ ಭಾಗದಲ್ಲಿದ್ದು, ಆಗ ಹೊಲಗಳೆಲ್ಲ ಹಸಿರಿನಿಂದ ಕಂಗೊಳಿಸುತ್ತಿರುತ್ತವೆ. ಮಕ್ಕಳು ಕೊಬ್ಬರಿಬಟ್ಟಲಿನ ಬುಗುರಿ ಆಡಿಸಿದರೆ, ಹೆಣ್ಣುಮಕ್ಕಳು ಜೋಕಾಲೆಯಲ್ಲಿ ತೊಡಗುತ್ತಾರೆ. ಗಂಡುಹುಡುಗರು, ಜೂಜು–ಮಸ್ತಿಗಳಲ್ಲಿ ೨–೩ ದಿನಗಳವರೆಗೆ ಆಚರಿಸಿ, ಸಂಭ್ರಮಿಸುತ್ತಾರೆ. ಮನೆಗಳಲ್ಲಿ ಕಡ್ಡಾಯವಾಗಿ ನಾಗನ ದಾರವನ್ನು ಧರಿಸುತ್ತಾರೆ. ಅದೇ ಈ ಹಬ್ಬದ ಸಂಕೇತ.

**ದಸರ**

ಆಶ್ವೀಜಮಾಸದ ಶುದ್ಧ ಪಾಡ್ಯಮಿಯಿಂದ ದಶಮಿಯವರೆಗಿನ ಹತ್ತು ದಿನಗಳು ಬಹು ಪ್ರಶಸ್ತವಾದವುಗಳು. ಮೊದಲ ಒಂಬತ್ತು ದಿನಗಳನ್ನು ನವರಾತ್ರಿಯೆಂದೂ, ಹತ್ತನೆಯ ದಿನವನ್ನು ವಿಜಯದಶಮಿಯೆಂದೂ ಕರೆಯುವುದುಂಟು. ಶರದ್ ಋತುವಿನಲ್ಲಿ ಬರುವುದರಿಂದ ಶರನ್ನವರಾತ್ರಿ ಎಂದು ಹೇಳುತ್ತಾರೆ.[೧೦] ಶಕ್ತಿಪೂಜೆ ಬಹು ಹಿಂದಿನಿಂದಲೂ ರೂಢಿಯಲ್ಲಿದೆ. ವೇದದಲ್ಲಿನ ದೇವೀಸೂಕ್ತ, ಶ್ರೀಸೂಕ್ತ ಮತ್ತು ಸೂಕ್ತಗಳು ವೇದಗಳ ಕಾಲದ ಶಕ್ತಿಪೂಜಾ ಪ್ರಾಮಾಣ್ಯಕ್ಕೆ ಆಧಾರವಾಗಿವೆ. ಕೇನ, ತೈತ್ತರೀಯ, ಶ್ವೆತಾಶ್ವತರ, ಉಪನಿಷತ್ತುಗಳಲ್ಲಿಯೂ ಶಕ್ತಿಪೂಜೆಯ ಸೂಕ್ತಗಳಿವೆ. ದೇವಿಭಾಗವತ, ಸಪ್ತಸತಿ ಮತ್ತಿತರ ಪುರಾಣಗಳಲ್ಲಿ ದೇವಿ ಮಹಿಮೆಯ ಕಥೆ ವಿಸ್ತಾರವಾಗಿದೆ. ಈ ಹಬ್ಬ ಲೋಕಕಂಟಕ ನಿವಾರಣೆ ಮತ್ತು ಲೋಕಕಲ್ಯಾಣದ ಉದ್ದೇಶ ಹೊಂದಿರುವಂತೆ ದುಷ್ಟಸಂಹಾರದ ಸಂಕೇತವಾಗಿದೆ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಮಾತೃದೇವತೆ ಆರಾಧನೆ ಕಾಣುತ್ತೇವೆ. ಗ್ರಾಮೀಣ ಮಟ್ಟದಲ್ಲಿ ಗ್ರಾಮದೇವತೆಯ ರೂಪದಲ್ಲಿ ಅನೇಕ ಆಚರಣೆ ಈ ವಿಜಯದಶಮಿಯಂದು ಕಂಡುಬರುತ್ತದೆ. ಹೆಚ್ಚು ಬುಡಕಟ್ಟಿನ ಜನರೇ ಇರುವ ಇಲ್ಲಿ ಬಲಿಪೂಜೆ ಹೆಚ್ಚಾಗಿ ಚಾಲ್ತಿಯಲ್ಲಿದೆ. ಇನ್ನೂ ಬೇರೆ ಸಮುದಾಯದ ಅಂದರೆ ವೀರಶೈವರು, ಆಚಾರ್ಯರು(ವಿಶ್ವಕರ್ಮ), ವೈಶ್ಯರು, ಬ್ರಾಹ್ಮಣರು, ಕ್ಷತ್ರಿಯರು, ೯ ದಿನಕಾಲ ದೇವತಾ ಮೂರ್ತಿಗಳನ್ನು ಪ್ರತಿಷ್ಠಾಪಿಸಿ ಒಂಬತ್ತು ದಿನಗಳ ಕಾಲ ಕುಮಾರಿಕೆ, ತ್ರಿಮೂರ್ತಿ, ಕಲ್ಯಾಣಿ,

ರೋಹಿಣಿ, ಕಾಳಿ, ಚಂಡಿಕೆ, ಶಾಂಭವಿ, ದುರ್ಗೆ ಮತ್ತು ಭದ್ರೆಯರನ್ನು ಒಂದು ದಿನ ಒಬ್ಬೊಬ್ಬ ಸ್ತ್ರೀ ದೇವಿಯ ಆರಾಧಿಸಿ ಸಕಲರೂಪದಲ್ಲಿ ದುರ್ಗೆಯನ್ನು ಕುರಿಸಿ ಪುರಾಣಪ್ರವಚನ ಮಾಡಿದರೆ ಕೆಲವರು ನೇಮ ನಿತ್ಯಗಳನ್ನು ಅನುಸರಿಸುತ್ತಾರೆ. ಬನ್ನಿಮರಕ್ಕೆ ಪ್ರಾತಃ ಕಾಲದಲ್ಲಿ ಸ್ತ್ರೀಯರು ಹೆಚ್ಚಾಗಿ ನಡೆದುಕೊಳ್ಳುವ ಆಚರಣೆ ಈ ಭಾಗದಲ್ಲಿ ರೂಢಿಯಲ್ಲಿದ್ದು, ವಿಜಯದಶಮಿಯಂದು ಬನ್ನಿ ಮುಡಿಯುವುದರ ಮೂಲಕ ಬನ್ನಿಕೊಟ್ಟು ಬಂಗಾರದಂಗೆ ಇರೋಣ ಎಂಬ ಆಶೆಯದೊಂದಿಗೆ ಸಂದೇಶ ವಿನಿಮಯ ಮಾಡುತ್ತಾರೆ. ಇದೇ ಹಬ್ಬದ ವಿಶೇಷ ಈ ಭಾಗದ ಆಂಜನೇಯ, ಶಿವ, ವೀರಭದ್ರ, ಬಸವಣ್ಣ, ಕಾಳಿ, ದುರ್ಗೆಯರನ್ನು ಪಲ್ಲಕ್ಕಿಗಳಲ್ಲಿ ಹೊತ್ತು ಬನ್ನಿ ಮುಡಿಯುವ ಪದ್ಧತಿಯು ಹೋಬಳಿ ಭಾಗದಲ್ಲಿದೆ.

**ಕ್ರಿಸ್‌ಮಸ್**

ಏಸು ಈ ದೇಶದಲ್ಲಿ ಜನ್ಮತಾಳದಿದ್ದರೂ ಭಾರತದ ಜನತಾಂತರ್ಗತವಾಗಿರುವ ಈ ಭೂಮಿಯಲ್ಲಿ ವಿಶಿಷ್ಟಸ್ಥಾನ ಪಡೆದು, ಎಲ್ಲ ದೇಶಗಳಂತೆ ಈ ದೇಶದಲ್ಲೂ ದಿವ್ಯ ಸಂದೇಶ ಆತನ ಜೀವನಚರಿತ್ರೆ, ಪುಣ್ಯಸ್ಮರಣೆ ರೂಪದಲ್ಲಿ ಜನ್ಮದಿನಾಚರಣೆ ಮಾಡುತ್ತಾರೆ. ಡಿಸೆಂಬರ್ ೨೫ರಿಂದ ಒಂದುವಾರ ಕಾಲ ಏಸುವಿನ ಜನ್ಮದಿನೋತ್ಸವ ಆಚರಿಸುವರು.[೧೧] ಏಸುಕ್ರಿಸ್ತನ ಪ್ರಭಾವ ಅಷ್ಟಾಗಿ ಕೂಡ್ಲಿಗಿ ತಾಲ್ಲೂಕಿನಲ್ಲಾಗಲಿ, ಹೋಬಳಿಯಲ್ಲಾಗಲಿ , ಗೋಚರಿಸುವುದಿಲ್ಲ. ಕೂಡ್ಲಿಗಿ, ಹೊಸಹಳ್ಳಿ ಭಾಗಗಳಲ್ಲಿ ಇತ್ತೀಚೆಗೆ ಚರ್ಚ್‌ಗಳು, ಕಾನ್ವೆಂಟುಗಳು ಆರಂಭಗೊಂಡಿವೆ. ಇದಕ್ಕೆ ಅನುಗುಣವಾಗಿ ಕ್ರೈಸ್ತಮಿಷನರಿಗಳ ಶಾಲೆಗಳ ನಿರ್ಮಾಣ ಮಾಡಿವೆ. ಇಲ್ಲಿ ಹೆಚ್ಚು ದಲಿದ ಸಮುದಾಯ ಮತ್ತು ಲಂಬಾಣಿ ಸಮುದಾಯದ ಜನರು ಭಾಗವಹಿಸುತ್ತಾರೆ. ಅದರ ಕಾರಣ ಏನಾದರೂ ಇದ್ದಿರಬಹುದು. ಆದರೆ ಪ್ರಸ್ತುತಕ್ಕೆ ಅದು ತೋರುವುದಿಲ್ಲ, ಈ ಕ್ರಿಶ್ಚಿಯನ್ ಬಂಧುಗಳು ಗುಡ್‌ಪ್ರೈಡೇ ಮತ್ತು ಹ್ಯಾಪಿ ಕ್ರಿಸ್‌ಮಸ್ ಇವರು ಆಚರಿಸುವ ಪ್ರಮುಖ ಹಬ್ಬಗಳು ಅಂದು ಏಸುವಿನ ಬೋಧನೆ ನೆನೆಯುತ್ತ, ನೆರೆಹೊರೆಯವರಿಗೆ ಸಿಹಿ ತಿನಿಸು ಹಂಚಿ ಶುಭಾಷೆಯ ವಿನಿಮಯ ಮಾಡಿಕೊಳ್ಳುತ್ತಾರೆ. ಇದು ಕೂಡ ಭಾರತೀಯ ಹಬ್ಬಗಳಲ್ಲಿ ಒಂದು ಭಾಗವಾಗಿದೆ.

**ಮುಸ್ಲಿಂ ಹಬ್ಬಗಳು**

ಈದ್-ಎ-ರಂಜಾನ್ ಎಂದು ಕರೆಯುವ ಇದು ಕುತುಬ್-ಎ-ರಂಜಾನ್ ಈದುಲ್ ಫಿತರ್ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ರಂಜಾನ್ ಹಬ್ಬವು ಮುಸ್ಲೀಮರ ದೊಡ್ಡ ಹಬ್ಬ ರಂಜಾನ್ ಮಾಸದ ಕೊನೆಯಲ್ಲಿ ಚಂದ್ರದರ್ಶನವಾದ ನಂತರ ಆಚರಿಸುತ್ತಾರೆ. ರಂಜನ್ ಒಂದು ತಿಂಗಳ ಪೂರ್ತಿ ದಾನ, ಉಪವಾಸ ವ್ರತಾದಿಗಳಿಂದ ಆಚರಿಸಲ್ಪಡುವುದು, ಉಪವಾಸ ಇತರರ ದುಃಖ-ಸುಖಗಳ ವಿವೇಚನೆಯನ್ನು ತರುತ್ತದೆ. ಪ್ರತಿ ಮುಸ್ಲಿಂನು ಉಪವಾಸವ್ರತ ಆಚರಿಸುತ್ತಾರೆ. ಈ ದಿನಗಳಲ್ಲಿ ಬಡವ-ಬಲ್ಲಿದ ಎಲ್ಲರೂ ಉಪವಾಸ ಮಾಡುತ್ತಾರೆ. ದೀನ-ದಲಿತರಿಗೆ, ಬಡವರಿಗೆ, ಜಾಕತ್(ದಾನ) ಮಾಡುವುದು ಪದ್ಧತಿಯಾಗಿದೆ. ರಂಜಾನ್ ತಿಂಗಳಲ್ಲಿ ಪವಿತ್ರ ಖುರಾನ್ ಮೊದಲುಗೊಂಡದ್ದು ಎಂದು ರಂಜಾನ್ ತಿಂಗಳ ೨೬ನೇ ದಿನ ಪವಿತ್ರ ರಾತ್ರಿ ಎಂದು ಆ ರಾತ್ರಿ 'ಲೈಲತ್ ಉಲ್ ಖದಕ್' ಅಥವಾ ಶಕ್ತಿ ರಾತ್ರಿ ಎಂದು ಕರೆಯುತ್ತಾರೆ. ಸ್ವರ್ಗದ ಬಾಗಿಲು ತೆರೆದಿರುತ್ತದೆಂದೂ ಮುಸ್ಲಿಂರು ನಂಬುತ್ತಾರೆ. ದಿನಕ್ಕೆ ೫ ಬಾರಿಯಂತೆ, ರಾತ್ರಿ ೮ರಿಂದ ೧೦.೩೦ ರವರೆಗೆ 'ತೆರಾವಿ ನಮಾಜ್' ಸಲ್ಲಿಸುತ್ತಾರೆ. ಖುರಾನಿನ ಸೂರಾಗಳನ್ನು ಓದಿ ಲೈಲಕ್‌ಉಲ್ ಖದರ್‌ನ ಕೊನೆಯಲ್ಲಿ ಮುಗಿಸುತ್ತಾರೆ. ಇದರಲ್ಲಿ ಸಾಮೂಹಿಕ ಪ್ರಾರ್ಥನೆ ಅಲ್ಲಾನ ಹೊರತು ಪೂಜೆ ಯಾರು ಅರ್ಹರಲ್ಲಿ ಎಂದು

ನಂಬುತ್ತಾರೆ. ಇದರ ಹಾಗೆ 'ಬಖರ್-ಈದ್'(ಈದ್-ಜಹಾ) ಜಿಲ್ ಹಜ್‌ಮಾಸದ ಹತ್ತನೆಯದಿನ ಈ ಹಬ್ಬ ಆಚರಿಸುತ್ತಾರೆ. ಇಬ್ರಾಹಿಂ ತನ್ನ ಪುತ್ರನಾದ ಇಸ್ಮಾಯಿಲ್‌ನನ್ನು ದೇವರು ಅಪೇಕ್ಷಿಸಿದ ಎಂಬುದಾಗಿ ತಲೆ ಕಡೆಯುತ್ತಾನೆ. ಆದರೆ ಚಮತ್ಕಾರ ಎಂಬಂತೆ ಮಗ ಅಲ್ಲಿಯೇ ನಿಂತಿರುತ್ತಾನೆ. ಇದನ್ನು ತ್ಯಾಗ, ನಿಷ್ಠೆ, ಸವಿನೆನಪಿಗಾಗಿ ಆಚರಿಸುತ್ತಾರೆ.[೧೨] ಈ ಎಲ್ಲಾ ಆಚರಣೆ ಕೂಡ್ಲಿಗಿ, ಹೋಬಳಿ ಭಾಗದಲ್ಲಿ ಹಿಂದೆ ಎಲ್ಲಿಯೂ ಕಂಡುಬರದಿದ್ದರೂ ಇತ್ತೀಚಿನ ದಿನಮಾನಗಳಲ್ಲಿ ಮಸೀದಿ, ಮದರಸಗಳ ನಿರ್ಮಾಣದಿಂದಾಗಿ ಮೌಲ್ವಿಗಳ ಉಪದೇಶಗಳಿಂದಾಗಿ ದೇವರು, ಧರ್ಮದ ಬಗ್ಗೆ ಆಸಕ್ತಿ ಹೊಂದಿ ಮುಸ್ಲಿಂ ಬಾಂಧವರು ಸಕ್ರೀಯವಾಗಿ ಭಾಗವಹಿಸುತ್ತಿದ್ದಾರೆ. ಅವುಗಳಲ್ಲಿ ಕೂಡ್ಲಿಗಿ, ಕೊಟ್ಟೂರು ಪ್ರದೇಶಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದರೆ ಇನ್ನೂ ಖಾನಹೊಸಹಳ್ಳಿಯಲ್ಲಿ ಇರುವ ಮುಸ್ಲಿಂ ಸಮುದಾಯಗಳು, ಕೂಡ್ಲಿಗಿಗೆ ಬಂದು ಪ್ರಾರ್ಥನೆ ಸಲ್ಲಿಸುತ್ತಿದ್ದರು. ಆದರೆ ಇಂದು ಅಲ್ಲಲ್ಲಿ ಮಸೀದಿಗಳನ್ನು ಸರ್ಕಾರ ಮತ್ತು ಖಾಸಗಿಯವರು ನಿರ್ಮಿಸಿಕೊಟ್ಟು ಪ್ರಾರ್ಥನೆಗೆ ಅನುಕೂಲ ಮಾಡಿದ್ದಾರೆ. 'ಮೊಹರಂ' ಈ ಹೋಬಳಿಯ ಹಲವು ಭಾಗದಲ್ಲಿ ಕಂಡುಬರುವ ಸರ್ವೇಸಾಮಾನ್ಯವಾದ ಹಬ್ಬವಾಗಿದೆ. ಇದೊಂದು ಸಂಭ್ರಮದ ಹಬ್ಬವಲ್ಲದಿದ್ದರೂ ಹಿಂದೂಗಳು, ಮುಸ್ಲಿಂರೊಂದಿಗೆ ಬೆರೆತು ಶ್ರದ್ಧೆ-ಭಕ್ತಿಗಳಿಂದ ಆಚರಿಸಿ ಮೂರು ದಿನಗಳ ಕಾಲ ಹುಲಿ, ಕರಡಿ ಇತರೇ ವೇಷ ಧರಿಸಿ ತಮ್ಮ ಹರಕೆ ಸಲ್ಲಿಸುವ ವಾಡಿಕೆ ಈ ಭಾಗದಲ್ಲಿ ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಲತಾ ಬಿ.ಕೆ, ಹೊಳಲ್ಕೆರೆ ಪಟ್ಟಣದ ಚಾರಿತ್ರಿಕ ಅಧ್ಯಯನ, ಎಂ.ಫಿಲ್, ಕಿರುಪ್ರಬಂಧ, ಪುಟ ೭೬

೨. ರೇವಣ್ಣ ಸಿದ್ದಯ್ಯ ಕೆ., ಕುಣಿಗಲ್ ಪಟ್ಟಣದ ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಕಿರುಪ್ರಬಂಧ, ಪು.೯೭

೩. ಸ.ಚಿ. ರಮೇಶ, ಕರ್ನಾಟಕದ ಜನಪದ ಆಚರಣೆಗಳು, ಪುಟ ೨೨೮

೪. ಎಸ್.ಎಸ್. ಹಿರೇಮಠ, ಕರ್ನಾಟಕ ಸಂಸ್ಕೃತಿ ಪರಂಪರೆ, ಭಾಗ ೧, ಪುಟ ೨

೫. ಎಂ. ನಾರಾಯಣ್, ಸಾಮಾಜಿಕ ಸಮಸ್ಯೆಗಳು, ಪುಟ ೫೯

೬. ಡಿ.ಟಿ. ರಂಗಸ್ವಾಮಿ, ಭಾರತದ ಹಬ್ಬಗಳು, ಪುಟ ೩೦

೭. ಅದೇ, ಪುಟ ೭೯

೮. ಅದೇ, ಪುಟ ೬೫

೯. ಅದೇ, ಪುಟ ೪೬

೧೦. ಅದೇ, ಪುಟ ೭೩

೧೧. ಅದೇ, ಪುಟ ೧೪೫

೧೨. ಅದೇ, ಪುಟ ೧೪೯

## ಅಧ್ಯಾಯ ೫

# ಸಮಾರೋಪ

ಇತಿಹಾಸವನ್ನು ಸಾಕ್ಷೀಕರಿಸಿ, ಒಂದು ನಾಡಿನ ಸಂಸ್ಕೃತಿಯನ್ನು ಪುನರ್‌ನಿರ್ಮಾಣಗೊಳಿಸುವಲ್ಲಿ ಮೂಲ ಆಕರ ಸಾಮಗ್ರಿಗಳು ಅತ್ಯವಶ್ಯಕ. ಅಂತವುಗಳಲ್ಲಿ ಶಾಸನಗಳು, ದೇವಾಲಯಗಳು, ಕೋಟೆ-ಕೊತ್ತಲು, ಕೆರೆಕಟ್ಟೆಗಳು ಅಂದಿನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ವಿಷಯಗಳ ಅಧ್ಯಯನ ಕೈಗೊಳ್ಳಲು ತುಂಬಾ ನೆರವಾಗುತ್ತವೆ. ಈ ದೃಷ್ಟಿಯಲ್ಲಿ ಕೂಡ್ಲಿಗಿ ಹೋಬಳಿ ಪರಿಸರಕ್ಕೆ ತಕ್ಕಂತೆ ಕ್ಷೇತ್ರಕಾರ್ಯ ಕೈಗೊಂಡಿದ್ದು, ಜೊತೆಗೆ ಕೂಡ್ಲಿಗಿ ಹೋಬಳಿ ಪರಿಸರದ ಭೌಗೋಳಿಕ ಹಿನ್ನೆಲೆಯು ವೈವಿಧ್ಯಮಯ, ಭೂಸ್ವರೂಪ, ಶುಷ್ಕವಾಯುಗುಣ ಜಿಲ್ಲೆಯಲ್ಲಿಯೇ ಅತೀ ಹೆಚ್ಚು ಕಾಯ್ದಿಟ್ಟ ಅರಣ್ಯ ಹೊಂದಿದ ಭೂಮಿಯಾಗಿದ್ದು, ಮುಂಗಾರು ಮಳೆಯನ್ನು ಹೆಚ್ಚು ಅವಲಂಬಿಸಿದೆ. ಹೋಬಳಿ ಭಾಗದಲ್ಲಿ ೬೦ ಸಾವಿರಕ್ಕಿಂತ ಮೇಲ್ಪಟ್ಟು ಜನಸಂಖ್ಯೆ ಇದ್ದು ಅದರಲ್ಲಿ ನಾಯಕ ಜನಾಂಗವೇ ಅಧಿಕ. ಒಂದು ಪಟ್ಟಣ ಪಂಚಾಯಿತಿ, ನಾಲ್ಕು ಕಂದಾಯ ಗ್ರಾಮಗಳು ಅದರ ವ್ಯಾಪ್ತಿಯ ೩೦ ಗ್ರಾಮಗಳು ಹೋಬಳಿ ಆಡಳಿತಕ್ಕೆ ಒಳಪಟ್ಟಿವೆ. ಇಲ್ಲಿನ ಪರಿಸರವು ಬೆಟ್ಟಗುಡ್ಡ ಅರಣ್ಯ ಪ್ರದೇಶವಾಗಿದ್ದು ಮಳೆಯಾಶ್ರಿತ ಭೂಮಿಯಾಗಿದೆ. ಭೌಗೋಳಿಕತೆಗೆ ಅನುಗುಣವಾಗಿ ಹಲವಾರು ಜಾತಿಯ ಮರಗಿಡಗಳು, ಕುರುಚಲುಕಾಡು ಕಂಡುಬರುತ್ತದೆ. ಕೂಡ್ಲಿಗಿಯ ಹೋಬಳಿಯಲ್ಲಾಗಲಿ, ತಾಲ್ಲೂಕಿನಲ್ಲಾಗಲೀ ಯಾವುದೇ ನದಿಪಾತ್ರದ ವ್ಯವಸ್ಥೆ ಇಲ್ಲ. ಇಲ್ಲಿನ ಬೆಟ್ಟ-ಗುಡ್ಡಕ್ಕೆ ಅನುಗುಣವಾಗಿ ಹಗರಿ-ಹಳ್ಳಗಳು ಪ್ರಮುಖ ಪಾತ್ರ ವಹಿಸುತ್ತವೆ. ಪ್ರತಿ ಒಂದೆರಡು ಗ್ರಾಮಗಳಿಗೆ ೨-೩ ಹಳ್ಳಗಳಿವೆ. ಇವು ಹಳ್ಳಿಗಳ ಜೀವಾಧಾರವಾಗಿವೆ. ಏಕದಳ, ದ್ವಿದಳ, ಧಾನ್ಯಗಳು, ಆಹಾರ ಬೆಳೆಗಳಾಗಿದ್ದು ಇವನ್ನೇ ಅವಲಂಬಿಸಿದ್ದಾರೆ.

ಅಧ್ಯಯನದ ಪ್ರಮುಖ ಕೇಂದ್ರಬಿಂದುವಾಗಿ ಆರಂಭವಾಗುವ ಕೂಡ್ಲಿಗಿ ಮತ್ತು ಅದರ ಪದನಿಷ್ಪತ್ತಿ, ಅರ್ಥ, ಕೂಡಿಸು, ಬಂದುಸೇರು, ಒಕ್ಕೂಟವಾಗು ಎಂಬೆಲ್ಲ ವಿವರ ಕೊಡುತ್ತದೆ. ಹೋಬಳಿಯಲ್ಲಿ ಆದಿಮಾನವನ ನೆಲೆ ಇರುವ ಅಭಿಪ್ರಾಯ ಕೆಲವು ಪುರಾತತ್ವಜ್ಞರು ವ್ಯಕ್ತಪಡಿಸುತ್ತಾರೆ. ಅದರಲ್ಲಿ ಕಕ್ಕುಪ್ಪಿ ಪ್ರಮುಖ ಉದಾಹರಣೆ: ಕೂಡ್ಲಿಗಿ ತಾಲ್ಲೂಕಿನ ಕೆಲವು ಗ್ರಾಮ ಪರಿಸರಗಳು, ಆದಿಮಾನವನ ನೆಲೆಗಳೆಂದು ಗುರ್ತಿಸಿದ್ದಾರೆ. ದೊಡ್ಡ ದೊಡ್ಡ ಸಂಶೋಧಕರು ಇಂತಹ ಗ್ರಾಮಗಳ ಕುರಿತು ಪ್ರಾಗಿತಿಹಾಸದ ವಿಷಯ ಹೊರತಂದಿದ್ದಾರೆ. ಉದಾಹರಣೆಗೆ: ಸಿಡೇಗಲ್ಲು, ಕುಮತಿ, ಜುಮ್ಮೋಬನಹಳ್ಳಿ, ಅಪ್ಪೇನಹಳ್ಳಿ, ಹುಲಿಕುಂಟೆ ಮುಂತಾದವು. ಕೂಡ್ಲಿಗಿ ತಾಲ್ಲೂಕು ಚಾರಿತ್ರಿಕ ದೃಷ್ಟಿಯಿಂದ ಮಹತ್ವದ್ದಾಗಿದೆ. ಅದಕ್ಕನುಗುಣವಾಗಿ ಕೂಡ್ಲಿಗಿ ಹೋಬಳಿ ಈ ವಿಷಯದಿಂದ ಹೊರತಾಗಿಲ್ಲ.

ಭಾರತದ ಮೊದಲ ಅರಸುಮನೆತನ ಮೌರ್ಯರ ಅಶೋಕನ ಕ್ರಿ.ಪೂ. ೨೫೮ರ ಶಾಸನ ತಾಲ್ಲೂಕಿನಲ್ಲಿ ಕಂಡುಬಂದಿರುವುದು. ಈ ಪ್ರದೇಶ ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ತಿಳಿಯುತ್ತದೆ. ಮೌರ್ಯರ ಉತ್ತರಾಧಿಕಾರಿಗಳಾದ ಶಾತವಾಹನರ ಕುರುಹುಗಳು, ಹೋಬಳಿಯ, ಕೂಡ್ಲಿಗಿ, ಶಿವಪುರದಲ್ಲಿ ದೊರೆತಿರುವುದು ಚಾರಿತ್ರಿಕ ದೃಷ್ಟಿಯಿಂದ ಗಮನಾರ್ಹ ಸಂಗತಿಯಾಗಿದೆ. ನಂತರ ಕದಂಬರಿಂದ ಹಿಡಿದು ವಿಜಯನಗರ ಅರಸರ, ಪಾಳೇಗಾರರವರೆಗೆ ಅವರ ಆಳ್ವಿಕೆಗೆ ಒಳಪಟ್ಟಿದ್ದು ಶಾಸನಗಳಿಂದ, ಇತಿಹಾಸ ಆಧಾರಗಳಿಂದ ತಿಳಿಯುತ್ತದೆ. ಅಷ್ಟೇ ಅಲ್ಲದೇ ಆದಿಲ್‌ಷಾಹಿಗಳು, ಹೈದರಾಲಿ, ಟಿಪ್ಪುಸುಲ್ತಾನ್, ನಿಜಾಮ್ ಮತ್ತು ಬ್ರಿಟಿಷರ ಧಾಳಿ ಹಾಗೂ ಆಳ್ವಿಕೆಯ ನೆರಳು ಹೋಬಳಿ ಪ್ರದೇಶದ ಮೇಲೆ ಆಗಿತ್ತು ಎಂಬುದು ಐತಿಹಾಸಿಕ ಸಂಗತಿಗಳಿಂದ ತಿಳಿಯುತ್ತದೆ. ಗಮನಾರ್ಹ ಸಂಗತಿ ಎಂದರೆ ಹೋಬಳಿಯು ನೊಳಂಬವಾಡಿ ೩೨,೦೦೦ ನಾಡಿನ ಕೋಗಳಿ ೫೦೦ರ ಭಾಗವಾಗಿತ್ತು.

ಕೂಡ್ಲಿಗಿ ಹೋಬಳಿ ಪ್ರದೇಶ ಹೆಚ್ಚು ಗುರುತಿಸಲ್ಪಟ್ಟದ್ದು ವಿಜಯನಗರ ಮತ್ತು ಪಾಳೇಗಾರರ ಆಳ್ವಿಕೆಯಲ್ಲಿ ಈ ಭಾಗ ಆ ಸಮಯದಲ್ಲಿ ರಾಜಕೀಯ ದೃಷ್ಟಿಯಿಂದ ಮಾನ್ಯತೆ ಗಳಿಸಿತ್ತು. ಕೂಡ್ಲಿಗಿ ಮೂಲದಲ್ಲಿ ಒಂದು ಬೇಡ ಸಮುದಾಯದ ಹಟ್ಟಿಯಾಗಿದ್ದು, ಇಲ್ಲಿನ ಜನ ಬೇಟೆ, ಕೃಷಿ, ಪಶುಪಾಲನ ಬದುಕನ್ನೇ ರೂಢಿಯಾಗಿಸಿ ಕೊಂಡು ಕಾಲಗತಿಯಲ್ಲಿ ಪರಿವರ್ತನೆ ಇಲ್ಲದಾಗಿ ಆಳರಸರ ನಿರ್ಲಕ್ಷಕ್ಕೆ ಒಳಗಾಗಿರಬಹುದು. ಆದರೆ ಕಟ್ಟುಮಸ್ತಾದ ದೇಹಸಿರಿ, ಬೇಟೆಗಾಗಿ ಹೋರಾಡುವ ದಿಟ್ಟತನ, ಎದೆಗಾರಿಕೆ ಕಂಡು ಕುಮ್ಮಟದುರ್ಗದ ಅರಸರು ಇವರು ಹೋರಾಟಕ್ಕೆ ಹೇಳಿ ಮಾಡಿಸಿದಂತೆ ಕಂಡುದರಿಂದ ತಮ್ಮ ಸೇನೆಗಳಲ್ಲಿ ಸೈನಿಕರಾಗಿಸಿಕೊಂಡು ಈ ಪ್ರದೇಶದ ಕಡೆ ಗಮನಹರಿಸಿದ ಕಾರಣ ಈ ಭಾಗದ ಜನ ಬದಲಾವಣೆ ಕಂಡಿರಬಹುದು. ಕಂಪಿಲರಾಯನ ವಂಶಸ್ಥ ಕುಮಾರರಾಮನು ನಾಯಕ ಸಮುದಾಯದವನಾಗಿದ್ದರಿಂದ ಇವನ ಪ್ರದೇಶಗಳು ಬೆಳಕಿಗೆ ಬಂದಿರಬಹುದಾದ ಆ ಕಾಲದಲ್ಲಿ ಕೂಡ್ಲಿಗಿ ಪ್ರದೇಶವು ಸೈನಿಕರ ದೃಷ್ಟಿಯಿಂದ ಗುರ್ತಿಸಿರಬಹುದು. ಮುಂದೆ ಅದು ವಿಜಯನಗರ ಕಾಲದಲ್ಲಿ ಬೇರೆ ಬೇರೆ ವಿಷಯಗಳಿಂದ ಬಂದು ಸೇರುವ ಜಾಗವಾಗಿ ಎಲ್ಲಾ ಜಾತಿ ಸಮುದಾಯಗಳು ಬಂದು ಇಲ್ಲಿ ಕೂಡಲಾಗಿ ಮುಂದೆ ಕೂಡಲಗಿ ಕೂಡ್ಲಿಗಿ ಆಗಿರಬಹುದು. ಸಾಮಾನ್ಯರು ಅರಸರು, ಗೂಡಾಚಾರರು, ಸೈನಿಕರು ಮುಂತಾದವರು ಒಟ್ಟಾಗಿ ಕೂಡುವ ಸ್ಥಳವೇ ಕೂಡ್ಲಿಗಿ ಆಗಿರಬೇಕು ಎಂಬುದು ನನ್ನ ಅಧ್ಯಯನ ಮೂಲದಿಂದ ಪಡೆದ ಮಾಹಿತಿ ಆಧಾರದಿಂದ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದೇನೆ.

ಕೂಡ್ಲಿಗಿ ಹೋಬಳಿಯು ವಿಜಯನಗರದ ಅರಸರ ಆಳ್ವಿಕೆ ನಂತರ ಪಾಳೇಗಾರರು ಸ್ವತಂತ್ರರಾಗಿ ಕೂಡ್ಲಿಗಿ ಹೋಬಳಿಯ ಮೇಲೆ ತಮ್ಮ ಹಿಡಿತ ಸಾಧಿಸಿದ ಅಂಶಗಳು ಚಾರಿತ್ರಿಕ ಅಧ್ಯಯನದಿಂದ ತಿಳಿದುಬರುತ್ತದೆ. ಅದಕ್ಕೆ ಸಾಕ್ಷಿಗಳೆನ್ನುವಂತೆ ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು, ಕೋಟೆಕೊತ್ತಲಗಳು, ಒಂದೆರಡು ಶಾಸನಗಳು ಇದಕ್ಕೆ ಪುಷ್ಠಿ ನೀಡುತ್ತವೆ. ತದನಂತರ ಇವರ ಮೇಲೆ ಸವಾರಿ ಮಾಡಿದ ದುರ್ಗದ ಪಾಳೇಗಾರರು, ಟಿಪ್ಪು, ನಿಜಾಮ್ ಧಾಳಿ ಮಾಡಿ ೧೮ನೇ ಶತಮಾನದ ಹೊತ್ತಿಗೆ ಪ್ರಭಲಗೊಂಡ ಬ್ರಿಟಿಷರಿಗೆ ಶರಣಾಗಬೇಕಾಗಿ ಬಂದು ತಾವು ಆಕ್ರಮಿಸಿದ್ದ ಹೋಬಳಿ ಪ್ರದೇಶಗಳನ್ನು ಇವರ ಪಾರುಪತ್ಯಕ್ಕೆ ಬಿಟ್ಟುಕೊಟ್ಟ ಸಂಗತಿ ಇತಿಹಾಸ ಪುಟಗಳಲ್ಲಿ ದಾಖಲಾಗಿವೆ. ಇನ್ನೂ ಹೋಬಳಿ ವ್ಯಾಪ್ತಿಗೆ ಬರುವ ಗ್ರಾಮಗಳ ಸ್ಥಳನಾಮ, ಪುರಾಣ ಐತಿಹ್ಯಗಳು ಇವುಗಳ ಅಭ್ಯಾಸಿಸುವಲ್ಲಿ ನೆರವಾಗುತ್ತವೆ. ಸಾಮಾನ್ಯವಾಗಿ ಸಸ್ಯವಾಚಿ, ಜಲವಾಚಿ, ವ್ಯಕ್ತಿವಾಚಿ ಮುಂತಾದ ಅಂಶದಡಿಯಲ್ಲಿ ಗ್ರಾಮಗಳ ಹೆಸರು ಮೂಡಿಬಂದಿದ್ದು ಕೆಲವು ಪೌರಾಣಿಕ ಹಿನ್ನೆಲೆಯಿಂದ ಬಂದಿದೆ ಇನ್ನೂ ಕೆಲವು ಐತಿಹ್ಯಗಳಿಂದ ಬಂದಿವೆ ಎಂಬ ಅಭಿಪ್ರಾಯ ವ್ಯಕ್ತವಾಗುತ್ತವೆ.

ವಾಸ್ತು ಕುರಿತಾದ ಹಿನ್ನೆಲೆ ನೋಡುವುದಾದರೆ ದೇವಾಲಯಗಳು ಮೊದಲಾಗಿ ತೆರೆದುಕೊಳ್ಳುತ್ತದೆ. ಹೋಬಳಿಯಲ್ಲಿ ಶೈವ, ವೈಷ್ಣವಧರ್ಮಗಳು, ಶತಮಾನಗಳಿಂದ ಕಂಡುಬಂದರು. ಹೇಳಿಕೊಳ್ಳುವಂತ ವಾಸ್ತು ಪ್ರಕಾರದ ಶಿವದೇವಾಲಯ, ವೈಷ್ಣವ ದೇವಾಲಯಗಳು, ಹೋಬಳಿ ಭಾಗದಲ್ಲಿ ಅಷ್ಟೇನು ಕಾಣಸಿಗುವುದಿಲ್ಲ. ಹೆಚ್ಚು ಬುಡಕಟ್ಟಿನ ಸಮುದಾಯಗಳೇ ವಾಸಿಸುವ ಪರಿಸರವಾಗಿರುವುದರಿಂದ ಶಕ್ತಿ ಆರಾಧನೆಯು ಗ್ರಾಮ ದೇವತೆಯ, ಮಾತೃದೇವತೆಯ ರೂಪದಲ್ಲಿ ಪ್ರತಿಗ್ರಾಮಗಳಲ್ಲಿ ಗೋಚರಿಸುತ್ತವೆ. ಅವು ಊರಮ್ಮ, ಚೌಡಮ್ಮ, ದುರ್ಗಮ್ಮ, ಸೊಲ್ಲಮ್ಮ, ಮಾರಮ್ಮ, ಲಕ್ಕಮ್ಮ, ಉಡಚಲಮ್ಮ, ಕನ್ನಿರಮ್ಮ, ಮಲೆಯಮ್ಮ ಮುಂತಾದ ಹೆಸರಿನಿಂದ ಪೂಜಿಸಲಾಗುತ್ತದೆ. ಜೊತೆಗೆ ಹನುಮಂತನಿಲ್ಲದ ಊರುಗಳೇ ಇಲ್ಲ ಎನ್ನಬಹುದು. ಹೋಬಳಿಯಲ್ಲಿ ಇಲ್ಲಿನ ಜನ ಕಟ್ಟುಸಂಪ್ರದಾಯ, ಮೂಲಪದ್ಧತಿ, ಬಲಿಆಚರಣೆ ರೂಢಿಸಿಕೊಂಡಿದ್ದು ಪ್ರತಿವರ್ಷವು ಜಾತ್ರೆ, ಬಲಿಆಚರಣೆ ಸಾಮಾನ್ಯ ಹಾಗೆ ಶಿಷ್ಟ ದೇವತೆಗಳಾದ ಬಸವಣ್ಣ, ಈರಣ್ಣ, ಶಿವ, ವಿಷ್ಣು, ಗಣಪತಿಯ ಆರಾಧನೆ ಕೂಡ ಇದೆ.

ವಾಸ್ತುವಿಚಾರವಾಗಿ ದೇವಾಲಯ, ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಇಹಪರ ಅರಿವಿಗೆ, ಮೂಲವಾಗಿ, ಮಠ ಶಿಕ್ಷಣ ಸಂಸ್ಥೆ, ನ್ಯಾಯಾಲಯವಾಗಿ ಆಧ್ಯಾತ್ಮಿಕ ಚಿಂತನಾಮಂಟಪವಾಗಿ ಹೋಬಳಿಯಲ್ಲಿ ಅನೇಕ ದೇವಾಲಯ ನಿರ್ಮಾಣಗೊಂಡು ಸಂಸ್ಕೃತಿಯ ಸ್ಥಿರತೆಗೆ ಸಹಕರಿಸಿವೆ. ಈ ಪರಿಸರದಲ್ಲಿ ಕಲ್ಯಾಣಿ ಚಾಲುಕ್ಯರಿಂದ ಹಿಡಿದು ಪಾಳೇಗಾರರ ಕಾಲದವರೆಗೆ ದೇವಾಲಯಗಳ ನಿರ್ಮಾಣ ಕಾಣಬಹುದು. ಅಂತವುಗಳನ್ನು ಈಗಾಗಲೇ ಗುರ್ತಿಸಿ ಅಧ್ಯಯನ ಮಾಡಿ ಪರಿಚಯಿಸಲಾಗಿದೆ. ಜೊತೆಗೆ ಕೆಲವು ಗುರ್ತಿಸದೆ ಇರುವ ವಿಜಯನಗರ ಕಾಲದ ದೇವಾಲಯಗಳನ್ನು ಕ್ಷೇತ್ರಕಾರ್ಯದಲ್ಲಿ ಹೊಸದಾಗಿ ಗುರ್ತಿಸಿ ಅವುಗಳನ್ನು ಪರಿಚಯಿಸಿದ್ದೇನೆ. ಹಾಗೆ ಈ ಹಿಂದೆ ಗುರ್ತಿಸಿದ ದೇವಾಲಯಗಳ ಮಾಹಿತಿ ಇಲ್ಲಿ ಪ್ರಸ್ತುತಪಡಿಸಿ ಅವುಗಳ ನಿರ್ಮಾಣ ರಚನೆ ಶೈಲಿ, ದಿಕ್ಕು, ಕಾಲಮಾನ, ಸ್ಥಳ, ದೇವಾಲಯದ ಹೆಸರುಗಳ ವಿವರ ನೀಡಲಾಗಿದೆ.

ಶಾಸನಗಳು ಹೋಬಳಿಯ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿ ಮೂಡಿಬಂದಿವೆ. ಸುಮಾರು ೮ರಿಂದ ೧೦ ಶಾಸನಗಳು ಕಂಡುಬಂದಿದ್ದು ಮುಖ್ಯವಾಗಿ ತಾಲ್ಲೂಕಿನಲ್ಲಿ ಅಶೋಕನ ಶಾಸನಬಿಟ್ಟರೆ ವಿಜಯನಗರದ ಶಾಸನ ಈವರೆಗೆ ಕಂಡುಬಂದಿವೆ. ಇದರಲ್ಲಿ ಹೆಚ್ಚು ಶಾಸನಗಳು ದಾನಶಾಸನಗಳಾಗಿವೆ. ಜೊತೆಗೆ ಪ್ರಕಟಿತ ಶಾಸನಗಳಲ್ಲದೆ ಹೊಸದಾಗಿ ಶಿವಪುರ, ಕೂಡ್ಲಿಗಿ, ವಿರುಪಾಪುರದಲ್ಲಿ ಅಪ್ರಕಟಿತ ಶಾಸನಗಳನ್ನು ಪತ್ತೆಹಚ್ಚಲಾಗಿದ್ದು ಅವುಗಳ ಮೇಲೆ ಬೆಳಕು ಚೆಲ್ಲಬೇಕಿದೆ. ಶಾಸನ ನಂತರ ಸ್ಥಾನಗಳೇ ವೀರಗಲ್ಲು. ಕೂಡ್ಲಿಗಿ ಹೋಬಳಿಯ ಸಾಂಸ್ಕೃತಿಕ ಅಧ್ಯಯನಕ್ಕೆ ಹಿನ್ನೆಲೆಯಾಗಿ ಮೂಡಿಬಂದಿವೆ. ಹಲವು ಗ್ರಾಮಗಳಲ್ಲಿ ವೀರಗಲ್ಲು ಕಂಡುಬರುತ್ತವೆ. ಇವುಗಳನ್ನು ವೀರಗಲ್ಲು, ಮಹಾಸತಿಗಲ್ಲು, ವೀರಮಾಸ್ತಿಗಲ್ಲು, ಈರಗಾರದೇವರು ಎಂಬೆಲ್ಲ ಹೆಸರುಗಳಿಂದ ಹೆಸರಿಸಲಾಗುತ್ತದೆ. ಅವುಗಳಲ್ಲಿ ಏಕಹಂತದ, ದ್ವಿಹಂತದ, ಮೂರುಹಂತದ, ನಾಲ್ಕುಹಂತದ ವೀರಗಲ್ಲು ಕಂಡುಬರುತ್ತವೆ. ಅವುಗಳನ್ನು ವ್ಯವಸ್ಥಿತವಾಗಿ ಅಭ್ಯಸಿಸಲಾಗಿದೆ.

ಕೋಟೆಗಳು, ಲೌಕಿಕ ವಾಸ್ತುಗಳಲ್ಲಿ ಪ್ರಮುಖವಾದವು ಕೂಡ್ಲಿಗಿನ ತಾಲ್ಲೂಕಿನ ಕೋಟೆಗಳ ಕುರಿತಾಗಿ ಅಭ್ಯಾಸಿಸಿ ಲೇಖನ ಹೊರತಂದಿದ್ದಾರೆ. ಅದಕ್ಕೆ ಪೂರಕವಾಗಿ ಹೋಬಳಿಯ ಕೆಲ ಗ್ರಾಮಗಳು ಕೋಟೆಗಳನ್ನು ಹೊಂದಿದ್ದವು ಎಂಬುದು ಕ್ಷೇತ್ರಕಾರ್ಯದಲ್ಲಿ ತಿಳಿದ ಸಂಗತಿಯಾಗಿದೆ. ಅದರಲ್ಲಿ ವೀರನದುರ್ಗ, ಅಮರದೇವರ ಗುಡ್ಡಗಳಲ್ಲದೆ ಹೊಸ ಕೋಟೆಗಳ ಮಾಹಿತಿಯನ್ನು ನನ್ನ ಅಧ್ಯಯನದಲ್ಲಿ ನೀಡಲಾಗಿದೆ. ಕೋಟೆಗಳಿಗೆ ಸಂಬಂಧಿಸಿದ ಸೂಕ್ತ ಮಾಹಿತಿ ಸಹಿತ ವಿವರಿಸಲಾಗಿದೆ. ನನ್ನ ಅಧ್ಯಯನದಲ್ಲಿ ಅವುಗಳ ಪಾತ್ರ ಸೂಕ್ತವೆನಿಸಿವೆ.

ಗ್ರಾಮಗಳ ಅಭಿವೃದ್ಧಿಯಲ್ಲಿ ಅವುಗಳ ಬೆಳವಣಿಗೆಯಲ್ಲಿ ಕೆರ-ಕಟ್ಟೆಗಳ ಪಾತ್ರ ಅತ್ಯಂತ ಮಹತ್ವದ್ದು, ಹೋಬಳಿಯ ನೀರಿನಾಶ್ರಯಕ್ಕೆ ಕೆರೆಕಟ್ಟೆಗಳನ್ನೇ ಅವಲಂಬಿಸಿರುವುದರಿಂದ ಕೆರೆಕಟ್ಟೆಗಳು ತುಂಬಾ ಅವಶ್ಯಕ. ಕೂಡ್ಲಿಗಿ ಹೋಬಳಿಯ ಪ್ರತಿಗ್ರಾಮ ಮಧ್ಯಮ ಗಾತ್ರದ ಕೆರೆಗಳನ್ನು ಹೊಂದಿದ್ದು ಹೋಬಳಿಯ ಸಾಂಸ್ಕೃತಿಕ ಅಧ್ಯಯನದಲ್ಲಿ ಆಚರಣೆಯಲ್ಲಿ ಇವುಗಳ ನಿರ್ವಾಹಣೆ ದೊಡ್ಡದು, ಅವರ ಬದುಕಿನ ಪೂಜೆ-ಆಚರಣೆ, ಬಲಿಗಳ ವಿಚಾರದಲ್ಲಿ ತುಂಬಾನೆ ವಿಶೇಷತೆ ಹೊಂದಿವೆ. ದೇವರ ರೂಪದಲ್ಲಿ ಕೆರೆಗಳನ್ನು ಆರಾಧಿಸುತ್ತಾರೆ. ಕೆರೆಗಳು ಆದಿಮಾನವನಷ್ಟೇ ಇವುಗಳ ಹಿನ್ನೆಲೆ ಇದೆ ಎನ್ನಲಾಗುತ್ತಿದ್ದರು. ಹೋಬಳಿ ಅಲ್ಲದೆ ತಾಲ್ಲೂಕಿನ ಕೂಡ್ಲಿಗಿ, ಕೊಟ್ಟೂರು, ಹನಸಿ ಕೆರೆಗಳು ಶತಮಾನಗಳಷ್ಟು ಇತಿಹಾಸ ಹೊಂದಿರುವುದು ದಾಖಲೆಗಳಿಂದ ತಿಳಿದುಬರುತ್ತದೆ. ಮೂರ್ತಿಶಿಲ್ಪದ ವಿಷಯದಲ್ಲಿ ಹೆಚ್ಚು ಆಂಜನೇಯನ ಮೂರ್ತಿಶಿಲ್ಪಗಳು ಹೋಬಳಿ ತುಂಬಾ ಕಂಡುಬರುತ್ತವೆ. ಹಾಗೆ ಸ್ತ್ರೀ ದೇವತೆಗಳು, ಬಸವಣ್ಣ, ಗಣಪನ ಮೂರ್ತಿಶಿಲ್ಪ, ಸಪ್ತಮಾತೃಕೆ, ಲಕ್ಷ್ಮಿವೆಂಕಟೇಶ್ವರ, ಶಿವಲಿಂಗದ ಮೂರ್ತಿಶಿಲ್ಪಗಳು ಅಲ್ಲಲ್ಲಿ ಕಾಣಸಿಗುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ಹಿಂದಿನಿಂದಲೂ ನಡೆದುಬಂದ, ಆಚರಿಸಿಕೊಂಡು ಹೋಗುವ ಅನೇಕ ನಂಬಿಕೆ, ಆಚರಣೆಗಳು, ಜಾತ್ರೆ, ಹಬ್ಬ-ಹರಿದಿನಗಳು ಇಂದಿಗೂ ಪ್ರಸ್ತುತದಲ್ಲಿವೆ. ಉದಾಹರಣೆ: ಊರಮ್ಮನ ಜಾತ್ರೆ, ಮೊರಬದ ವೀರಭದ್ರೇಶ್ವರ ಜಾತ್ರೆ ಮಾತ್ರ ಇಲ್ಲಿ ಹೇಳಲಾಗಿದೆ. ಹೀಗೆ ಹಲವು ಗ್ರಾಮ, ಊರುಗಳಲ್ಲಿ ಆಯಾ ಗ್ರಾಮ ದೇವರುಗಳಿಗೆ ಸಂಬಂಧಿಸಿದ ಜಾತ್ರೆಗಳು ಜರುಗುತ್ತವೆ. ವಿಶಿಷ್ಟ ಆಚರಣೆಯಲ್ಲಿ ಮಧ್ಯಾಹ್ನಮಾರವ್ವ, ಹೋಳಿಗೆ ಅಮ್ಮ, ಪ್ರತಿಗ್ರಾಮದಲ್ಲಿ ಆಚರಿಸುವುದರಿಂದ ಅಂತವುಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಇನ್ನೂ ಪ್ರತಿ ಗ್ರಾಮದಲ್ಲಿ ಒಂದೊಂದು ರೀತಿಯ ಒಂದೊಂದು ಆಚರಣೆ ಕಂಡುಬರುತ್ತವೆ. ಜೊತೆಗೆ ವಿವಾಹಕಾರ್ಯ, ಕೃಷಿ ಆಚರಣೆಗಳು, ಹಬ್ಬಗಳು ಅವುಗಳಲ್ಲಿ ಯುಗಾದಿ, ಶಿವರಾತ್ರಿ, ದೀಪಾವಳಿ, ಗಣೇಶ ಚತುರ್ಥಿ, ನಾಗರಪಂಚಮಿ, ದಸರಾ, ಕ್ರಿಸ್‌ಮಸ್, ಮುಸ್ಲಿಂ ಹಬ್ಬಗಳ ಕುರಿತಾದ ಆಚರಣೆಯ ವಿಧಿ-ವಿಧಾನಗಳ ಪರಿಚಯ ಅವುಗಳಿಗೆ ಸಂಬಂಧಿಸಿದ ಅದಕ್ಕೆ ಅನುಗುಣವಾಗಿ ಸ್ಥಳೀಯರಿಂದ ಪಡೆದ ಮಾಹಿತಿ ವಿವರ. ಶಾಸನ, ವೀರಗಲ್ಲು, ಕೋಟೆಗಳ ಕುರುಹು ಚಿತ್ರ, ಅಳವಡಿಕೆ, ಹಾಗೆ ಪ್ರಾಗಿತಿಹಾಸ, ಚಾರಿತ್ರಿಕ, ಧಾರ್ಮಿಕ, ಹಬ್ಬ-ಆಚರಣೆ, ನಂಬಿಕೆ ಕುರಿತು ಸೂಕ್ತ ಗ್ರಂಥಗಳ ಅಭ್ಯಾಸಿಸಿ ವ್ಯವಸ್ಥಿತ ಮಾಹಿತಿ ನೀಡುವ ಕೆಲಸ ಹೋಬಳಿ ವಿಭಾಗದಲ್ಲಿ ಪ್ರಥಮಬಾರಿಗೆ ಮಾಡಲಾಗಿದೆ. 'ಇದೊಂದು ಸಂಶೋಧನಾ ವಿಷಯ ಸಮರ್ಥನೆಗಾಗಿ ಸಾಧ್ಯವಾದಷ್ಟು ಒಂದು ವರ್ಷದ ಅಭ್ಯಾಸದ ಅಧ್ಯಯನ ಅವಧಿಯಲ್ಲಿ ವಸ್ತುನಿಷ್ಠವಾಗಿ, ವಿಷಯಕ್ಕನುಗುಣವಾಗಿ ಪ್ರಯತ್ನಿಸಲಾಗಿದೆ. ಹಾಗೆ ವಾಸ್ತುಶಿಲ್ಪ, ದೇವಾಲಯ, ಶಾಸನ, ವೀರಗಲ್ಲು, ಕೆರೆಕಟ್ಟೆಗಳ ಸಮಗ್ರ ಚಿತ್ರಣ ನೀಡಲಾಗಿದೆ. ಇಲ್ಲಿ ನೀಡಲಾದ ಎಲ್ಲಾ ಮಾಹಿತಿ ಸೂಕ್ತ ಮಾರ್ಗದರ್ಶನ ಮುಖಾಂತರ ಕೂಡ್ಲಿಗಿ ಹೋಬಳಿಯ ಸಮಗ್ರ ಚಿತ್ರಣ ನೀಡಲು ಒಂದು ಕಿರು ಪ್ರಯತ್ನ ನನ್ನಿಂದ ಮೂಡಿಬಂದಿದೆ. ಈ ಪ್ರಬಂಧದಲ್ಲಿ ಉಲ್ಲೇಖಿಸಿರುವ ಹೋಬಳಿ ಗ್ರಾಮಗಳಿಗೆ ಭೇಟಿನೀಡಿ ಸ್ಥಳದಲ್ಲಿ ಅಧ್ಯಯನ ಕೈಗೊಂಡು ಇದಕ್ಕೆ ಪೂರಕವೆಂಬಂತೆ ಸ್ವಂತ ಅಭಿಪ್ರಾಯವನ್ನು ನೀಡುತ್ತಾ ನನ್ನ ಕಿರುಪ್ರಬಂಧ ರಚಿಸಲಾಗಿದೆ.

ಈ ಪ್ರಬಂಧಕ್ಕೆ ಪೂರಕ ಆಕಾರಗಳಾದ ನಕಾಶೆ, ವಕ್ತೃವಿವರ, ದೇವಾಲಯ ನೀಲನಕ್ಷೆ(ತಲವಿನ್ಯಾಸ), ಛಾಯಾಚಿತ್ರ ಹಾಗೂ ಆಕರಗ್ರಂಥಗಳ ಪಟ್ಟಿಯನ್ನು ಒದಗಿಸಲಾಗಿದೆ.

# ಅನುಬಂಧಗಳು

## ಆಕರಗ್ರಂಥ

ಅರ್ಪರ್ಣ ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಅರವಿಂದ ಮಾಲಗತ್ತಿ(ಪ್ರ.ಸಂ.), ಕನ್ನಡ ವಿಷಯ ವಿಶ್ವಕೋಶ, ಸಂಪುಟ ೧, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೫

ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಪಿಎಚ್.ಡಿ., ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಕಾಂತರಾಜ್ ಹೆಚ್., ಐಮಂಗಲ ಹೋಬಳಿ ಪರಿಸರ: ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೊಟ್ರಯ್ಯ ಸಿ.ಟಿ.ಎಂ., ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಕೊಟ್ರೇಶ್ ಎಂ., ಬಳ್ಳಾರಿ ಜಿಲ್ಲೆಯ ಕೋಟೆ-ಕೊತ್ತಲಗಳು, ಪಿಎಚ್.ಡಿ. ಮಹಾಪ್ರಬಂಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಗೋವಿಂದಪ್ಪ ಈ., ಕೂಡ್ಲಿಗಿ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು, ಎಂ.ಫಿಲ್. ಕಿರುಪ್ರಬಂಧ(ಅ.ಪ್ರ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

ಚನ್ನಬಸಪ್ಪ ಪಾಟೀಲ್ ಎಸ್., ವಿನೋದ್ ಪಾಟೀಲ್ ಎಸ್., ಕರ್ನಾಟಕ ಶಾಸನ ಸಂಪುಟ-೨, ಬಳ್ಳಾರಿ ಜಿಲ್ಲೆಯ ಶಾಸನಗಳು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೨

ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೨

ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಜಾಜಿ ದೇವೇಂದ್ರಪ್ಪ, ಆಂಧ್ರ-ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು, ವಿಕಾಸ ಪ್ರಕಾಶನ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೪

ಜೋಶಿ ಎಸ್.ಕೆ., ಕರ್ನಾಟಕದ ಕೋಟೆ-ಕೊತ್ತಲಗಳು, ಭಾಗ-೧, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೭-೦೮

ತಿಪ್ಪೇಸ್ವಾಮಿ ಡಿ., ಕೋಗಳಿ ನಾಡಿನ ಶಾಸನಗಳು: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

ತಿಪ್ಪೇಸ್ವಾಮಿ ಎಚ್., ಕೂಡ್ಲಿಗಿ ತಾಲ್ಲೂಕಿನ ಪ್ರಾಗೈತಿಹಾಸಿಕ ನೆಲೆಗಳು, ಇತಿಹಾಸ ದರ್ಶನ, ಸಂ.೧೬, ೨೦೦೧

ಧ್ರುವ ನಾಗರಾಜ ಮತ್ತು ನಾ. ಗದಗಕರ., ದೇಗುಲ ರಥಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ದೀಕ್ಷಿತ್ ಜಿ.ಎಸ್., ಕುಪ್ಪುಸ್ವಾಮಿ ಜಿ.ಆರ್. ಮತ್ತು ಮೋಹನ್ ಎಸ್.ಕೆ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಶಾಸನಗಳು, ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ, ಗುಲ್ಬರ್ಗ, ೧೯೯೨

ನಾರಾಯಣ ಎಂ., ಸಾಮಾಜಿಕ ಸಮಸ್ಯೆಗಳು, ಚೇತನ ಬುಕ್‌ಹೌಸ್, ಅಂಜನಾದ್ರಿ ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು, ೨೦೦೩

ಬಸವರಾಜ ಎಚ್.ಎಂ., ಗುಡೇಕೋಟೆ: ಒಂದು ಚಾರಿತ್ರಿಕ ಅಧ್ಯಯನ, ಎಂ.ಫಿಲ್. ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಭಟ್ ಎ.ಎನ್, ನಿರ್ಮಲ್ ಭಟ್., ಭಾರತೀಯ ಹಬ್ಬಗಳ ವೈಶಿಷ್ಟ್ಯ, ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಶಿವಮೊಗ್ಗ, ೨೦೦೨

ಪ್ರಭಾಕರ್ ಎಂ.ಎನ್., ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು, ೧೯೯೧

ಮಹಾದೇವ ಸಿ., ಬಳ್ಳಾರಿ ಜಿಲ್ಲೆಯ ಮರದ ವಾಸ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಮಠ ಜಿ.ಎ., ಸುಧಾರಿತ ನೀರಾವರಿ ಪದ್ಧತಿಗಳು, ಪ್ರಸಾರಾಂಗ, ಕರ್ನಾಟಕ ವಿ.ವಿ., ಧಾರವಾಡ, ೧೯೯೩.

ಯೋಗೀಶ್ವರಪ್ಪ ಡಿ.ಎನ್, ಮಧ್ಯಕಾಲೀನ ಕರ್ನಾಟಕದ ಪಾಳೇಗಾರರು, ದಾತ್ರಿ ಪುಸ್ತಕ ಮಾಲೆ, ಬೆಂಗಳೂರು, ೨೦೦೯

ರವಿಕುಮಾರ್ ಎನ್.ಎಂ., ವೃಷಬೇಂದ್ರಾಚಾರ್, ಮುನ್ನಡೆಯ ಕೂಡ್ಲಿಗಿ, ಹಿಮಂತ ಪ್ರಕಾಶನ, ಎಂ.ಬಿ. ಅಯ್ಯನಹಳ್ಳಿ, ೧೯೯೮

ರಾಜರಾಮ್ ಹೆಗಡೆ, ಕೆರೆನೀರಾವರಿ ನಿರ್ವಾಹಣೆ ಚಾರಿತ್ರಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ರಹಮತ್ ತರಿಕೆರಿ, ಸಾಂಸ್ಕೃತಿಕ ಅಧ್ಯಯನ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮

ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೫

ರೇವಣ್ಣ ಸಿದ್ದಯ್ಯ ಕೆ., ಕುಣಿಗಲ್ ಪಟ್ಟಣದ ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

ಲತಾ ಜಿ.ಕೆ.,ಹೊಳಲ್ಕೆರೆ ಪಟ್ಟಣದ ಚಾರಿತ್ರಿಕ ಅಧ್ಯಯನ, ಎಂ.ಫಿಲ್. ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ ಅಧ್ಯಯನ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ವಾಸುದೇವ ಬಡಿಗೇರ, ಸಂಡೂರು ಪರಿಸರದ ಕಾರ್ತಿಕೇಯ, ತಪೋವನಮಯ ಪ್ರಕಾಶನ, ಕಮಲಾಪುರ, ೧೯೯೭

ವಾಸುದೇವನ್ ಸಿ, ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೇಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ವಿರೂಪಾಕ್ಷಿ ಪೂಜಾರಹಳ್ಳಿ, ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ೨೦೦೬

ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

ವಿಜಯಕುಮಾರ್ ಆರ್, ಶ್ರೀ ವೀರಭದ್ರೇಶ್ವರಸ್ವಾಮಿ: ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ವೀರೇಶ., ಬಳ್ಳಾರಿ ತಾಲ್ಲೂಕಿನ ಸ್ಥಳನಾಮಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭

ಸುರೇಶ ಕೆ.ಎಂ.,ವಾಸುದೇವ ಬಡಿಗೇರ, ಕೊಟ್ರೇಶ್ ಎಂ. ಮತ್ತು ಸೋಮಶೇಖರ್ ಎಸ್.ವೈ., ಕರ್ನಾಟಕ ದೇವಾಲಯ ಕೋಶ: ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಹಿರೇಮಠ ಎಸ್.ಎನ್., ಕರ್ನಾಟಕ ಸಂಸ್ಕೃತಿ ಪರಂಪರೆ, ಭಾಗ ೧, ಹಬ್ಬಗಳು, ಸಮತಾ ಪ್ರಕಾಶನ, ಹರಪನಹಳ್ಳಿ, ೧೯೯೨

**ವಕ್ತೃ ವಿವರ**

೧. ವೀರಭದ್ರಣ್ಣ, ಅಮರದೇವರಗುಡ್ಡ, ೫೨ ವರ್ಷ, ಊರಿನ ನಾಗರಿಕರು

೨. ಕರವೀರಪ್ಪನವರ ವೀರಭದ್ರಪ್ಪ, ಅಮರದೇವರಗುಡ್ಡ, ೬೦ ವರ್ಷ, ವೃದ್ಧರು

೩. ಎಂ. ನಾಗಭೂಷಣ, ಅಮ್ಮನಕೆರೆ, ೬೭ ವರ್ಷ, ಶಿಕ್ಷಕರು

೪. ನಾಗಣ್ಣ, ಬಡೇಲಡಕು, ೫೬ ವರ್ಷ, ಕೃಷಿಕರು

೫. ಬಸಣ್ಣ, ಕುಪ್ಪಿನಕೆರೆ, ೬೬ ವರ್ಷ, ಕೃಷಿಕರು

೬. ಕೊಡ್ಲಿಮಠದ ವೀರಯ್ಯ, ಮೊರಬ, ೬೮ ವರ್ಷ, ವ್ಯವಸಾಯ

೭. ಪೂಜಾರ ಮುಪ್ಪಿನಜ್ಜ, ಮೊರಬ, ೬೮ ವರ್ಷ, ವ್ಯವಸಾಯ

೮. ಗುರಿಕಾರ ತಿಪ್ಪೇಸ್ವಾಮಿ, ವೀರನದುರ್ಗ, ೫೫ ವರ್ಷ, ಕೃಷಿಕರು

೯. ಕೆ.ಎಂ. ವೀರಯ್ಯ, ಅಮ್ಮನಕೆರೆ, ೭೦ ವರ್ಷ, ನಿವೃತ್ತ ಶಿಕ್ಷಕರು

೧೦. ಬಾಗಳಿ ಬಸಪ್ಪ ಆಚಾರ್ಯ, ಸಾಸಲವಾಡ, ೭೦ ವರ್ಷ, ನಿವೃತ್ತ ಶಿಕ್ಷಕರು

೧೧. ಮಲ್ಲಣ್ಣ ಕೆ, ಕೂಡ್ಲಿಗಿ, ೮೦ ವರ್ಷ, ಹಿರಿಯ ಪತ್ರಕರ್ತರು

೧೨. ಹೊನ್ನಪ್ಪ, ಕೂಡ್ಲಿಗಿ, ೭೨ ವರ್ಷ, ನಿವೃತ್ತ ಶಿಕ್ಷಕರು

೧೩. ರಾಜಣ್ಣ, ಕೂಡ್ಲಿಗಿ, ೫೫ ವರ್ಷ, ಪುರೋಹಿತರು

೧೪. ಜೋಶಿಮಾಸ್ತರು, ಕೂಡ್ಲಿಗಿ, ೬೮ ವರ್ಷ, ನಿವೃತ್ತ ಶಿಕ್ಷಕರು

೧೫. ಬಣಕಾರ ಬಸಣ್ಣ, ಕಕ್ಕುಪ್ಪಿ, ೬೭ ವರ್ಷ, ಹಿರಿಯ ನಾಗರಿಕರು

೧೬. ಬಸಣ್ಣ, ಸಿಡೇಕಲ್ಲು, ೭೫ ವರ್ಷ, ಹಿರಿಯ ಕೃಷಿಕರು

೧೭. ವಸಂತ, ಜರಿಮಲೆ, ೩೦ ವರ್ಷ, ವ್ಯವಸಾಯಗಾರ

**ತಾಂತ್ರಿಕ ಮತ್ತು ಇಲಾಖೆ ಮಾಹಿತಿ**

1. www.onefivenine.comkudligitaluk
2. Kudligi Taluku Profile, 2001-2011
3. Government of Karnataka Rural Development and Panchaayat Raj Department (Badaladuku, Shivapura)
4. AEEMT Agriclture Department, Kudligi
5. Kudligi V.A. Information of Obali




ನಕ್ಷೆ : ಕೊಪ್ಪಳ ಜಿಲ್ಲೆ.

ತಲನಕ್ಷೆ ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವಸ್ಥಾನ





ಬಂಡೆಚಿತ್ರ, ಸಿಡೇಗಲ್ಲು.




ಆದಿಮಾನವನ ಶಿಲಾಯುಧಗಳು, ಸಿಡೇಗಲ್ಲು



ರುದ್ರಯ್ಯನ ಮಠ, ಜೀರಲಗುಡ್ಡ.



ವೀರಭದ್ರೇಶ್ವರ ದೇವಾಲಯ, ಮರಬ.



ಕೇಶವ ಮೂರ್ತಿಶಿಲ್ಪ, ಕೂಡ್ಲಿಗಿ.



ಅಮರದೇವರ ಗುಡ್ಡದ ಕೋಟೆ, ಕೂಡ್ಲಿಗಿ.



ಈರಗಾರ ದೇವರು(ವೀರಗಾರ ದೇವರು),
ವಿರುಪಾಪುರ.



ಆಲದಮರ, ಕೂಡ್ಲಿಗಿ.(ಪಿರಾಮಿಡ್)



ಅಮ್ಮನಕೆರೆ ಕೋಟೆ.



ವೀರನದುರ್ಗದ ಕೋಟೆ.
(ಜೀರಲಗುಡ್ಡ)



ಮೊರಬ ಶಾಸನ



ವಸಂತಮಲ್ಲಿಕಾರ್ಜುನ ದೇವಸ್ಥಾನ, ದೇವಲಾಪುರ.
(ಬಡೇಲಡಕು)



ಶಿವಪುರ ಶಾಸನ



ಶಿವಪುರದ ವೀರಗಲ್ಲು



ದ್ವಿಕೂಟದೇವಾಲಯ, ಸಾಸಲವಾಡ.



ಕಲ್ಲಿನರಥ ಕಪಿಲೇಶ್ವರ ದೇವಾಲಯ, ಕೂಡ್ಲಿಗಿ.



ಕಪಿಲೇಶ್ವರ ದೇವಾಲಯ, ಕೂಡ್ಲಿಗಿ.



ವೀರಗಲ್ಲು, ಕೂಡ್ಲಿಗಿ.

